# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೯ ಸೆಪ್ಟಂಬರ್ ೧೯೮೪

[ಕಳೆದ ಸಂಚಿಕೆಯಿಂದ]

## ಶ್ರೀ ಸಿದ್ಧಗಂಗಾ ಮಹಿಮ್ನ: ಸ್ತೋತ್ರ

—ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

ಧರೆಯು ಕಳ್ತಲೆ ಕಳೆಯೆ ಬುಧನುತ
ಚರಣ ಸರಸಿಜ ಸಿದ್ಧಲಿಂಗನ
ಕರುಣೆಯಿಂ ವರಸಿದ್ಧಗಂಗಾಕ್ಷೇತ್ರ ಪತಿಎನಿಸಿ ।
ತೆರೆದು ವಿದ್ಯಾಲಯುಗಳನುದಿನ
ಹರುಷದಿಂ ವಿದ್ಯಾರ್ಥಿ ವೃಂದವ
ಪೊರೆವ ಶಿವಕುಮಾರ ಕುಲಪತಿಗಕ್ಕೆ ಮಂಗಲವು ॥೭॥

ಅರಿವೆ ದೈವದ ನ್ಯೆಯು ಬೆಳಗೆಂ
ದರಿದು ಮತಕೋಮುಗಳ ನೆಣಿಸದೆ
ನಿರುತ ವಿದ್ಯಾರ್ಥಿಗಳ ಪೋಷಿಪ ಗುರುವಿನಡಿಗೆರಗಿ ।
ಕರೆಕರೆದು ಜನತತಿಯು ನಿರುತವು
ಪರಿಪರಿಯ ಸಾಹ್ಯವನು ನೀಡುತೆ
ಪರತರೋತ್ಸಾಹದಲಿ ಗೌರವವಿತ್ತು ಸೇವಿಪುದು ॥೮॥

# ಈ ಸಂಚಿಕೆಯಲ್ಲಿ



# ಶ್ರೀವಾಣಿ

## ಹೆಣ್ಣು : ಅಂದು ಇಂದು

ಹೆಣ್ಣು ಕುಟುಂಬದ ಕಣ್ಣು. ಅವಳು ಒಳ್ಳೆಯವಳಿದ್ದು ತನ್ನ ಮಕ್ಕಳನ್ನು ಒಳ್ಳೆಯವರನ್ನಾಗಿ ಬೆಳೆಸಿದರೆ ಆ ಕುಟುಂಬ ಹಸನಾಗುತ್ತದೆ. ಒಂದೊಂದು ಕುಟುಂಬವೂ ಹಸನಾದರೆ ಸಮಾಜ ಹಸನಾಗುವುದು ಎಷ್ಟು ಹೊತ್ತು?

ಮೊದಲಿಗೆ ಹೆಣ್ಣು ತನ್ನ ಹೊಣೆಗಾರಿಕೆಯನ್ನು ಅರಿಯ ಬೇಕು. ಯಾವುದನ್ನು ಮಾಡಿದರೆ ತನಗೆ ತನ್ನ ಇಡೀ ಕುಟುಂಬಕ್ಕೆ ಲೇಸಾಗುತ್ತದೆ ಎಂಬುದನ್ನು ಕಂಡುಕೊಂಡು, ಅದರಂತೆ ನಡೆದರೆ ಪ್ರಗತಿ ಖಂಡಿತ. ಹೆಣ್ಣು ಸಹನೆಗೆ, ತ್ಯಾಗಕ್ಕೆ ಬೇರೊಂದು ಹೆಸರು. ತನಗಿಲ್ಲದಿದ್ದರೂ ತನ್ನ ಗಂಡನಿಗೆ ಮಕ್ಕಳಿಗೆ ನೀಡುವ ಆಕೆಯ ತ್ಯಾಗಗಳು ಸಣ್ಣವಲ್ಲ. ನಾಡುನುಡಿಯನ್ನು ಕಟ್ಟುವ ಮುಂದಿನ ಪೀಳಿಗೆಯನ್ನು ಬೆಳೆಸುವಾಗ ಆಕೆ ನಿರ್ವಹಿಸಬೇಕಾದ ಜವಾಬ್ದಾರಿ ಚಿಕ್ಕದೇನಲ್ಲ. ಆಕೆ ಮಾಡುವ ಸೇವೆ ಯಾವ ದೇಶಭಕ್ತನ ಸೇವೆಗಿಂತಲೂ ಕಡಿಮೆಯದಲ್ಲ.

ಇತ್ತೀಚಿಗೆ ಹೆಣ್ಣಿನ ಬಗ್ಗೆ ಆರೋಗ್ಯಕರವಾದ ವಾತಾವರಣ ಕಡಿಮೆಯಾಗಿದೆ. ಸಿನಿಮಾ ಪ್ರಭಾವ, ಕ್ಯಾಬರೆ ನೃತ್ಯವೆಂಬ ಪೀಡೆಗಳು, ಹೆಣ್ಣಿನ ಮಾನ, ಮರ್ಯಾದೆ, ಘನತೆ, ಗೌರವಗಳನ್ನು ಹೀಗಳೆಯುತ್ತಿವೆ. ಮಹಾಭಾರತದಲ್ಲಿ ದ್ರೌಪದಿಯೊಬ್ಬಳನ್ನು ಅವಮಾನ ಮಾಡಿದ ಪ್ರಸಂಗದಿಂದ ಎಂಥ ಪ್ರಮಾದವಾಯಿತು. ಕುರುಕ್ಷೇತ್ರದಂಥ ಯುದ್ಧ ನಡೆದು ಮಾನವ ಶಕ್ತಿ ಹಾಗೂ ಭೌತಿಕಶಕ್ತಿಗಳೆರಡೂ ನಾಶವಾದವು. ಆದ್ದರಿಂದ ಇಂದು ಹೆಣ್ಣಿನ ಬಗ್ಗೆ ಜನ ತಳೆದಿರುವ ದೃಷ್ಟಿ ಅಪಾಯಕಾರಿ. ಹೆಣ್ಣು ಮಕ್ಕಳೂ ಕೂಡ ಇದನ್ನು ಅರ್ಥಮಾಡಿಕೊಳ್ಳಬೇಕು ಆದರ್ಶಭಾರತೀಯ ಸ್ತ್ರೀಯ ಹಿರಿಯ ಸಂಸ್ಕೃತಿಯನ್ನು ನೆನೆಯಬೇಕು.

ಅದನ್ನು ಅರಿತು ಅನುಸರಿಸುವಲ್ಲಿ ಶ್ರಮಿಸಬೇಕು. ಹೀಗೆ ಮಾಡುವಲ್ಲಿ ಮಹಿಳಾ ಸಮಾಜಗಳು ದಾರಿ ದೀಪವಾಗಬೇಕು.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಡಾ|| ಚನ್ನಪ್ಪ ಎರೇಸೀಮೆ

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 201-00 ರೂ

1984 ನೇ ಜನವರಿಯಿಂದ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶ ವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ದಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಒಂದು ರಾಜ್ಯದ ಮಂತ್ರಿ ಪದವಿಯನ್ನು ಗಿಟ್ಟಿಸಿಕೊಂಡ ನಂತರ ತಮಗೆ ಸಹಸ್ರ ಬಾಹುಗಳು ಹತ್ತಿಸಿಕೊಂಡಂತೆ ಆತ್ಮ ಪ್ರತ್ಯಯ ಹೊಂದಿ ಬೇಗಿ ಕೆಲಸಕ್ಕೆ ತೊಡಗುವವರೇ ಹೆಚ್ಚು. ಅವರು ತಮ್ಮನ್ನು ತಾವು ಅದ್ಭುತ ಪ್ರತಿಭಾ ಸಂಪನ್ನರೆಂದೂ, ದಕ್ಷ ಆಡಳಿತ ಪಟುಗಳೆಂದೂ, ವಿವೇಕೋನ್ನತ ಪ್ರಭೃತಿಗಳೆಂದೂ, ತಿಳಿದುಕೊಂಡು ಬಿಡುತ್ತಾರೆ. ಭಾರತದಂತ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರದ ವಿವಿಧ ರಾಜ್ಯಗಳಲ್ಲಿ ಮಂತ್ರಿ ಮಂಡಲ ರಚನೆಯ ಹೊಣೆಗಾರಿಕೆ ಚಿಕ್ಕದಲ್ಲ. ಪಕ್ಷದ ಮುಖಂಡನಿಗೆ ಈ ಸಮಯದಲ್ಲಿ ಉಂಟಾಗುವ ಅಡ್ಡಿ ಆತಂಕಗಳಿಗೆ ಲೆಕ್ಕವಿಲ್ಲ. ವಿವಿಧ ಜಾತಿ, ಕೋಮು, ಪಂಗಡ, ಭಾಗಗಳ ಪ್ರಾತಿನಿಧ್ಯ ಉಳಿಸಿಕೊಂಡು ಪ್ರತಿಭಾಶಾಲಿಗಳನ್ನೂ, ಸಮದರ್ಶಿಗಳನ್ನೂ, ಉತ್ಸಾಹೀ ಅನುಭವಿಗಳನ್ನು ಮಂತ್ರಿಮಂಡಲಕ್ಕೆ ಸೇರ್ಪಡೆ ಮಾಡಿಕೊಳ್ಳುವಾಗ ಮುಖಂಡನಿಗೆ ಸಾಕು ಬೇಕಾಗಿ ಹೋಗುತ್ತದೆ. ಕಷ್ಟ ನಿಷ್ಠುರಗಳೂ ಕಾಲ್ತೊಡಕಾಗುತ್ತವೆ. ಈ ಕಾರಣದಿಂದಲೇ ಮಂತ್ರಿ ಮಂಡಲಗಳು ಒಂದು ಘಟಕವಾಗಿ ಕೆಲಸ ಮಾಡಲಸಮರ್ಥವಾಗಿ ಬೇಗ ಅಭಿಪ್ರಾಯಭೇದ, ವರ್ಣಭೇದ, ಬೇರೆ ಪಕ್ಷದವರ ಆಸೆ ಆಮಿಷಗಳಿಗೆ ಬಲಿಯಾಗಿ ಮಧ್ಯಂತರದಲ್ಲೇ ನುಚ್ಚು ನೂರಾಗಿ ರಾಷ್ಟ್ರ ಹಿತಕ್ಕೆ ಮಾರಕವಾಗತೊಡಗಿವೆ. ಮಂತ್ರಿಮಂಡಲ ಏಕಾಭಿಪ್ರಾಯದಿಂದ ಪರಸ್ಪರ ಪ್ರೀತಿ ಗೌರವಗಳಿಂದ ಕಲೆತು ಮಾತನಾಡಿ, ಭಿನ್ನಾಭಿಪ್ರಾಯಗಳನ್ನು ಸಂಯಮದಿಂದ ದೂರಮಾಡಿಕೊಂಡು ಅವಧಿ ಮುಗಿಸಿ ಹೊರಬರುವುದನ್ನಂತೂ ನಮ್ಮ ಈ ಅಪಕ್ವ ಬುದ್ಧಿಯವರೂ ಸಂಯಮ ರಹಿತರೂ ಆಡಳಿತಾನುಭವ ದೂರರೂ ಆದ ಮಂತ್ರಿಗಳು ಕಲಿಯಲೇ ಇಲ್ಲ. ಹೀಗಾಗಿ ರಾಜ್ಯ ಹಿತವನ್ನು ಕಡೆಗಣಿಸಿ ಕೆಲವು ದಿನದಲ್ಲಿ ಬೇರೆ ಮಂತ್ರಿಮಂಡಲಗಳು ಹುಟ್ಟಿಕೊಳ್ಳುತ್ತವೆ. ಅದು ಹುಟ್ಟಿದ ದಿನದಿಂದಲೇ ಅದನ್ನು ನೆಲಕ್ಕೆ ಕೆಡಹುವ ವಿಧಾನವನ್ನು ಬೇರೆಯವರು ಚಿಂತೆ ಮಾಡಲು ತೊಡಗುತ್ತಾರೆ. ಉದ್ದುದ್ದ ಹೇಳಿಕೆಗಳನ್ನು ಬದ್ಧವೋ ಅಬದ್ಧವೋ ಹೇಗೋ ಕೊಡುತ್ತ ಬೊಬ್ಬೆ ಹಾಕುತ್ತ, ತಮ್ಮದೇ ಆದ ರೀತಿಯಲ್ಲಿ ಪ್ರಚಾರಕ್ಕೆ ತೊಡಗುತ್ತಾರೆ. ಹೀಗಾಗುವುದರಿಂದ ರಾಜ್ಯಕ್ಕೆಷ್ಟು ಅಹಿತವಾಗುತ್ತದೆ. ರಾಜ್ಯ ಬೊಕ್ಕಸದಿಂದ ಆಗುವ ಖರ್ಚು ವೆಚ್ಚಗಳೇನು? ಈ ಹೆದರಿಕೆ ಬಹುಶಃ ಇಂದಿನ ರಾಜಕಾರಣಿಗಳಿಗೆ ಇದ್ದಂತಿಲ್ಲ. ಸ್ವಾತಂತ್ರ್ಯ ನಂತರ ನಮ್ಮ ದೇಶದ ರಾಜಕೀಯ ರಂಗ ಪ್ರವೇಶಿಸಿದ ಪ್ರತಿಯೊಬ್ಬನು ಹತ್ತು ಮೊಳದುದ್ದ ಬೆಳೆದು ಎದ್ದುನಿಂತುಬಿಡುತ್ತಾನೆ. ತನ್ನನ್ನು ತಾನು ವಿಮರ್ಶೆಗೊಳಪಡಿಸಿಕೊಳ್ಳುವುದು

ತೀರಾ ಕಡಿಮೆ. ಈ ದೇಶದಲ್ಲಿ ಪ್ರತಿಭಾವಂತರು ಇಲ್ಲವೆಂತಲ್ಲ; ಜ್ಞಾನಿಗಳು, ಕರ್ತವ್ಯ ಕುಶಲಮತಿಗಳು ಇಲ್ಲವೆಂತಲ್ಲ. ಆದರೆ ದುರ್ದೈವದ ಸಂಗತಿಯೆಂದರೆ ಅವರಾರೂ ರಾಜಕೀಯ ರಂಗ ಪ್ರವೇಶಕ್ಕೆ ಮನಸ್ಸು ಮಾಡುವುದಿಲ್ಲ; ಮನಸ್ಸು ಮಾಡಿದರೂ ಅವರು ಈಗಿನ ಪದ್ಧತಿಯ ಚುನಾವಣೆಯಲ್ಲಿ ಗೆದ್ದು ಬರುವುದು ದುಸ್ತರ. ಗೆದ್ದು ಬಂದರೂ ಮಂತ್ರಿಗಳಾಗುವುದು ಅಪರೂಪ. ಮಂತ್ರಿಗಳಾದರೂ ಇವರ ವಿವೇಕಕ್ಕೆ ಬೆಲೆ ಬರುವುದು ದುರ್ಲಭ. ಹೀಗಾಗಿ ರಾಜ್ಯಗಳ ಆಡಳಿತ ದಿನೇ ದಿನೇ ಕುಸಿಯ ತೊಡಗಿದೆ. ಸಂಪನ್ನರು, ಬುದ್ಧಿ ಜೀವಿಗಳು, ವಿಚಾರವಂತಿಗಳು ಮುಂದೆ ನಮ್ಮ ಗತಿಯೇನೆಂದು ತಲೆಯ ಮೇಲೆ ಕೈ ಹೊತ್ತುಕೊಂಡು ಕೂಡುವ ಪರಿಸ್ಥಿತಿಯೊದಗಿದೆ. ಮೊನ್ನೆ ತಾನೆ ಕರ್ನಾಟಕ ರಾಜ್ಯದ ಹೊಸ ಮಂತ್ರಿಮಂಡಲ ರಚನೆಯಾಗಿ ಎರಡು ವರ್ಷ ತುಂಬುವುದರೊಳಗಾಗಿ ಕೆಲವು ಮಂತ್ರಿಗಳ ನಿರ್ಗಮನ, ಮುಖ್ಯಮಂತ್ರಿಗಳ ಕೈ ಬಲಪಡಿಸಲು ರಾಜೀನಾಮೆ ಸ್ವೀಕಾರ, ಇದೆಲ್ಲ ನಡೆದುದರ ಹಿನ್ನೆಲೆಯನ್ನು ಊಹಿಸು ವುದು ಕಷ್ಟವಲ್ಲ. ಈಗಿನ ಮಂತ್ರಿಮಂಡಲದಲ್ಲಿ ಒಳಗೊಳಗೆ ಏನೇನೋ ಅಸಮಾಧಾನದ ಹೊಗೆ ಹರಡಿದೆಯೆಂದೂ, ಅತೃಪ್ತರಾದ ಕೆಲ ಶಾಸಕರು ತೃಪ್ತರಾಗಲು ಮುಖ್ಯ ಮಂತ್ರಿಗಳ ಮೇಲೆ ಒತ್ತಡ ತಂದಿರಬಹುದೆಂದೂ ಒಟ್ಟಾರೆ ಯೋಚಿಸಬಹುದು. ಹೀಗಾಗುವುದು ಅಭಿವೃದ್ಧಿ ಹೊಂದಲಿರುವ ಯಾವ ರಾಜ್ಯಕ್ಕೆ ಭೂಷಣ? ಇನ್ನಾದರೂ ಸೇವಾ ಭಾವನೆಯಿಂದ ಉತ್ಸಾಹಗೊಂಡು ಒಗ್ಗಟ್ಟಿನಿಂದ ರಾಜ್ಯ ಹಿತ ಸಾಧಿಸುವ ಮಂತ್ರಿಮಂಡಲ ಹುಟ್ಟಿದರೆ ಸಂತೋಷ ಪಡಬಹುದು. ಇಂದು ಬಂದು ನಾಳೆ ಹೋ ಗುವ ಮಂತ್ರಿಗಳು ಏನು ಸಾಧಿಸಿಯಾರು? ಇದೊಂದು ಅಪಹಾಸ್ಯದ ಆಟವಾಗದೆ ನಾಲ್ಕು ದಿನ ಆದ ಹಾಗಾಯಿತು, ನಾವೂ ಮಂತ್ರಿಗಳಾಗಿ ಒಂದುಕೈ ನೋಡಿಬಿಡೋಣ ಎನ್ನುವುದಕ್ಕಿಂತ ಶುದ್ಧಹಸ್ತರಾಗಿ ವಿವೇಕ ಶಾಲಿಗಳಾಗಿ ರಾಜ್ಯದ ಸಮಗ್ರ ಮುಖಗಳ ಹಿತ ಸಾಧಿಸುವವರು ಮುಂದೆಬಂದು ಆಯಾ ಸ್ಥಾನಗಳನ್ನು ಅಲಂಕರಿಸಿಯಾರೆ? ಎಂದು ಜನತೆ ಎದುರು ನೋಡುತ್ತಿದೆ. ಅಂಥ ಒಳ್ಳೆಯ ಕಾಲ ಬೇಗ ಬರಲೆಂದು ಹಾರೈಸುತ್ತೇವೆ.

## ಸಮಾಜದ ಪ್ರಜ್ಞಾವಂತ ವ್ಯಕ್ತಿ ಶಿಕ್ಷಕ

ವಿಚಾರವಂತರ ಮಾತು : ಸಂಸ್ಕೃತಿಯ ಸಂಕ್ಷಿಪ್ತ ಲೋಕ ಅವನು. ಹಾಗೆಂದೇ 'ಆಚಾರ್ಯ ದೇವೋಭವ' ಎಂಬ ಪ್ರಶಸ್ತಿ ಆತನಿಗೆ. ದಿನವೊಂದರಲ್ಲಿ ಪಡೆದ ಬಿರುದಲ್ಲ. ಸಹಸ್ರಾರು ವರ್ಷಗಳ ಸಾಧನೆ, ನಿರಂತರ ತಪಸ್ಸು. ಸೆಪ್ಟಂಬರ್ 5 ಶಿಕ್ಷಕರ ದಿನಾಚರಣೆ. ರಾಷ್ಟ್ರದ ಉದ್ದಗಲದಲ್ಲಿ ಅದರ ಆಚರಣೆ. ಕಾರಣ ವಾದದ್ದು ಡಾ|| ಸರ್ವಪಲ್ಲಿ ರಾಧಾಕೃಷ್ಣನ್ ರವರು. ಯಾರವರು ? ಪ್ರಥಮವಾಗಿ

ಅಧ್ಯಾಪಕ. ಹಂತ ಹಂತವಾಗಿ ಮೇಲೇರಿದ ಆಚಾರ್ಯ. ರಾಷ್ಟ್ರದ ಪ್ರಥಮ ಪ್ರಜೆಯಾಗಿ ಶಿಕ್ಷಕ ಸಮುದಾಯಕ್ಕೆ ಚಿನ್ನದ ಕಿರೀಟವಿಟ್ಟ ದಾರ್ಶನಿಕ. ಶಿಕ್ಷಕ ದಾರ್ಶನಿಕನಾದರೆ ರಾಷ್ಟ್ರಕ್ಕೆ ಮಂಗಳ. ಡಾ|| ಸರ್ವಪಲ್ಲಿ ರಾಧಾಕೃಷ್ಣನ್ ರವರ ಹುಟ್ಟು ಹಬ್ಬ ಸೆಪ್ಟೆಂಬರ್ 5. ಅಭಿಮಾನ ಬೇಕು ಶಿಕ್ಷಕ ವರ್ಗಕ್ಕೆ. ಅಂಥವರ ಪರಂಪರೆ ನಮ್ಮದೆಂದು. ದೇಶದ ದಿಕ್ಕು ದೆಸೆಗಳಲ್ಲಿ ಇಂದು ಕಲ್ಲಾ ಬಿಲ್ಲಿ. ಸಮರ್ಥ ಶಿಕ್ಷಕರ ಅಭಾವ. ಒಲವಿಲ್ಲದವರೂ ಇಲ್ಲಿ ದಾರಿ ತೋರಿಸುವ ನಾಟಕ. ಶಿಕ್ಷಕನಿಗೆ ಬೇಕು ತಾಯಿ ಕರುಳು ತಂದೆಯ ದೂರ ದೃಷ್ಟಿ, ಅವುಗಳಿಗೇ ಇಂದು ಅಭಾವ. ಬೋಧನೆ ಹೃದಯ ಮುಟ್ಟುತ್ತಿಲ್ಲ. ವಿದ್ಯಾರ್ಥಿಗಳನ್ನು ತಮ್ಮ ಬೋಧನೆ, ವ್ಯಕ್ತಿತ್ವಗಳಿಂದ ಆಕರ್ಶಿಸುತ್ತಿಲ್ಲ. ವ್ಯಾವಹಾರಿಕ ಬುದ್ಧಿಯ ಬಾವುಟದ ಹಾರಾಟ. ವ್ಯಕ್ತಿಯೂ ಆಗಿಲ್ಲ, ಬೋಧನೆ ಇಂದು ಕೇವಲ ಉಪ ಕಸುಬಾಗಿದೆ. ಎಲ್ಲೆಲ್ಲಿಯೂ ಸಲ್ಲದವರಲ್ಲಿ ಸಲ್ಲುತ್ತಿರುವ ಸೋಜಿಗ. ಶಿಕ್ಷಕ ರಾಜಕಾರಣಿಗಳ ಅಬ್ಬರ, ಆರ್ಭಟದಲ್ಲಿ ನಿಜವಾದ ಶಿಕ್ಷಕ ಮೌನಮಂತ್ರ ಜಪ ಮಾಡುವ ಪರಿಸ್ಥಿತಿ. ಶಿಕ್ಷಕ ಪರಂಪರೆಯ ಚರಿತ್ರೆ ಗೊತ್ತಿಲ್ಲ, ತಿಳಿದುಕೊಳ್ಳಬೇಕೆಂಬ ಆಸಕ್ತಿಯೂ ಶೂನ್ಯ. ವ್ಯಕ್ತಿಯ ಘನತೆ, ಗಾಂಭೀರ್ಯಗಳ ಬಗ್ಗೆ ಚಿಂತನ ಮಂಥನ ನಡೆದಿಲ್ಲ. ಶಿಕ್ಷಕನಾದವನು ನಿರಂತರ ವಿದ್ಯಾರ್ಥಿ, ಸದಾ ಅಭ್ಯಾಸಿ, ಅವಿರಥ ಸಾಧಕ, ಉತ್ತಮ ಕಲಾವಿದ, ಎಲ್ಲ ಹೇಳುವುದಕ್ಕೆ ಮೀಸಲು. ಅನುಸರಣೆಯಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು. ತಲಸ್ಪರ್ಶಿ ಜ್ಞಾನದ ಅಭಾವ. ಶಿಕ್ಷಕನಿಗೇ ಗೊತ್ತಿಲ್ಲದ ಮೇಲೆ ವಿದ್ಯಾರ್ಥಿಗೆ ಕಲಿಸುವುದು ಹೇಗೆ? ಏನನ್ನು ಕಲಿಸುವುದು? ಹಿರಿಯ ಅಧ್ಯಾಪಕರ ಅನುಭವಕ್ಕೆ ಮೂರು ಕಾಸಿನ ಬೆಲೆ ಇಲ್ಲ. ಬಡ್ತಿಗಳ ಮೇಲೆ, ಅಧಿಕಾರದ ಮೇಲೆ ಹದ್ದಿನ ಕಣ್ಣು. ಸಮಾಜಕ್ಕೆ ಉತ್ತರ ಹೇಳುವ ನೈತಿಕ ಧೈರ್ಯ, ಸ್ಥೈರ್ಯಗಳ ಅಭಾವ. ಆಯ್ಕೆ ಮಾಡಿಕೊಂಡ ವಿಷಯದ ಪೂರ್ಣ ಪರಿಚಯ ಮಾಡಿಕೊಳ್ಳಬೇಕೆಂಬ ತವಕವಿಲ್ಲ; ಸರ್ಕಾರ, ಸಮಾಜ ಶಿಕ್ಷಕರನ್ನೂ ಸರಿಯಾಗಿ ನೋಡುತ್ತಿಲ್ಲ, ನಡೆಸಿಕೊಳ್ಳುತ್ತಿಲ್ಲ ಎಂಬ ಕೊಂಕು ನುಡಿ. "ನಾವೇನು ಮಾಡುತ್ತಿದ್ದೇವೆ?" ಎಂಬ ಆತ್ಮ ವಿಮರ್ಶೆ? ಕೇಳಬೇಡಿ. ರಾಷ್ಟ್ರ ತನ್ನ ಶಿಕ್ಷಕನಲ್ಲಿ ಜೀವಿಸುತ್ತದೆ ಎಂಬ ನುಡಿ ಕುಡಿಯೊಡೆಯುವಂತಾಗಲಿ. ಸಮಾಜ, ಸರ್ಕಾರ, ತನ್ನಿಂದ ಕಲಿತ ವಿದ್ಯಾರ್ಥಿ ಗೌರವಿಸುವಂತೆ ಬಾಳುವ, ಬೋಧಿಸುವ, ಸಂಕಲ್ಪ ಇಂದಾಗಲಿ. ಒಂದು ದೇಶದ ಸಂಸ್ಕೃತಿಯ ಪರಿಚಯವಾಗಬೇಕಾದರೆ, ಆ ದೇಶದ ಚರಿತ್ರೆ, ಶಾಸನ, ಕಲೆ, ಸಾಹಿತ್ಯ, ಆಚಾರ, ವಿಚಾರಗಳಿಗೆಲ್ಲ ಕನ್ನಡಿ ಶಿಕ್ಷಕ-ನೆಂಬುದು ಮುತ್ತಿನಂಥ ಮಾತು. ಹಾಗಾಗಲು ಇಂದು ದೀಕ್ಷಾಬದ್ಧರಾಗಬೇಕು. A great teacher inspires ಎಂಬ ಉಕ್ತಿ ಜೀವಂತವಾಗಿ ಅರಳುವಂತಾಗಲಿ. ನಾಡಿನ ದೀಪ ಶಿಕ್ಷಕ. ಆದರ್ಶ ಶಿಕ್ಷಕ ಇಂದೂ ಇದ್ದಾನೆ. ಆ ಪಂಕ್ತಿಯ ಒಂದು ರತ್ನ ಡಾ|| ಸರ್ವಪಲ್ಲಿ ರಾಧಾಕೃಷ್ಣರವರು. ಅವರು ನಡೆದ ದಾರಿಯಲ್ಲಿ ಹೆಜ್ಜೆ ಹಾಕೋಣ. ಅಂಥ ಶಿಕ್ಷಕಬಂಧುವಿಗೆ ಕೈಮುಗಿಯೋಣ.

# ನವನೀತ 

(ಸಂಸ್ಕೃತ ಶ್ಲೋಕಗಳ ಕನ್ನಡ ಭಾವಾನುವಾದ)

1) ಅಪಿ ಮಾನುಷ್ಯಕಂ ಲಬ್ಧ್ವಾ ಭವಂತಿ ಜ್ಞಾನಿನೋ ನ ಯೇ ।
ಪಶುರ್ವೈವ ಪರಾ ತೇಷಾಂ ಪ್ರತ್ಯವಾಯಾಪ್ರವರ್ತನಾತ್ ॥

—ಸಭಾರಂಜನ ಶತಕ

ಮನುಷ್ಯ ಜನ್ಮವನ್ನು ಪಡೆದಿದ್ದರೂ ಯಾರು ವಿದ್ಯಾವಂತರಾಗುವುದಿಲ್ಲವೋ ಅವರು ಪಶುಗಳಾಗಿ ಹುಟ್ಟಿದ್ದರೆ ಒಳ್ಳೆಯದಾಗುತ್ತಿತ್ತು. ಏಕೆಂದರೆ ಪಶುಗಳಿಗೆ ಪಾಪದ ಲೇಪವಿಲ್ಲ.

2) ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ ।
ಸ ಏವ ಸರ್ವ ಶಾಸ್ತ್ರಜ್ಞಃ ಯಸ್ಯ ಶಾಂತ ಮನಃ ಸದಾ ॥

—ಮಹಾಭಾರತ

ಸಕಲ ಶಾಸ್ತ್ರಗಳನ್ನೂ ವಿದ್ವಾಂಸರು ರಚಿಸಿರುವುದು ಮನಃ ಶಾಂತಿ ಲಭಿಸಲೆಂದು. ಯಾರ ಮನಸ್ಸು ಶಾಂತವಾಗಿದೆಯೋ ಅವನೇ ಸರ್ವ ಶಾಸ್ತ್ರಜ್ಞ.

3) ಪಶ್ಯಸ್ಯದ್ರೌ ಜ್ವಲದಗ್ನಿಂ ನಪುನಃ ಪಾದಯೋರಧಃ ।
ಯತ್ಪರಂ ಶಿಕ್ಷಯಸ್ಯೇವಂ ನ ಸ್ವಂ ಶಿಕ್ಷಯಸಿ ಸ್ವಯಮ್ ॥

—ಪರಿಶಿಷ್ಟ ಪರ್ವ

ಬೆಟ್ಟದಲ್ಲಿ ಉರಿಯುತ್ತಿರುವ ಅಗ್ನಿಯನ್ನು ಕಾಣುತ್ತೀಯೆ ಕಾಲಿನ ಕೆಳಗೆ ಇರುವ ಬೆಂಕಿಯು ಗೊತ್ತಿಲ್ಲ. ಬೇರೆಯವರಿಗೆ ನೀತಿಯನ್ನು ಹೇಳುತ್ತೀಯೆ. ಆದರೆ ನೀನು ನೀತಿಯನ್ನು ಪಾಲಿಸುತ್ತಿಲ್ಲ.

# ಕ್ಷೇತ್ರವಾರ್ತೆ

—ಪಿ. ಎನ್. ಚಂದ್ರಶೇಖರಯ್ಯ

6-8-84 ರಂದು ಶ್ರೀಮಠದ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ 1984-85 ನೇ ವರ್ಷದ ಉದ್ಘಾಟನಾ ಸಮಾರಂಭವು ಪರಮಪೂಜ್ಯ ಶ್ರೀ ಶ್ರೀಗಳವರ ನೇತೃತ್ವದಲ್ಲಿ ನೆರವೇರಿತು. ಶ್ರೀ ಎಸ್. ಬಿ. ಶ್ರೀನಿವಾಸನ್ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ತುಮಕೂರು ಇವರು ಉದ್ಘಾಟನಾ ಭಾಷಣ ಮಾಡಿದರು. ಕೇವಲ ಓದು, ಬರೆಹ ಲೆಕ್ಕಾಚಾರಗಳೇ ಶಿಕ್ಷಣದ ಗುರಿಯಲ್ಲ. ವಿನಯ ಶಿಸ್ತು, ನಡತೆ ಇವುಗಳು ವ್ಯಕ್ತಿಯನ್ನು ಸುಸಂಸ್ಕೃತನನ್ನಾಗಿ ಮಾಡುತ್ತವೆ. ವ್ಯಕ್ತಿಯ ನಡೆನುಡಿಗಳಲ್ಲಿ ಅವನ ಗುಣಗಳನ್ನು ಕಾಣಬಹುದು. ಆದರೆ ಸದ್ಗುಣಗಳುಳ್ಳ ವ್ಯಕ್ತಿಗಳು ಇಂದು ಸಮಾಜದಲ್ಲಿ ಕಾಣುವುದು ವಿರಳವಾಗಿದೆ. ಇದರ ಪರಿಣಾಮವಾಗಿ ಅನೇಕ ಬಗೆಯ ಘರ್ಷಣೆಗಳು ಸಮಾಜದಲ್ಲಿ ಸಂಭವಿಸುತ್ತಿರುವುದನ್ನು ಕಾಣುತ್ತೇವೆ. ಆದ್ದರಿಂದ ವಿದ್ಯಾರ್ಥಿಗಳು ಜ್ಞಾನಾರ್ಜನೆಯ ಜೊತೆಗೆ ಉತ್ತಮ ಮಾನವೀಯ ಸದ್ಭಾವನೆಗಳನ್ನು ಬೆಳೆಸಿಕೊಳ್ಳಬೇಕೆಂದು ಕರೆಯಿತ್ತರು.

ಶ್ರೀ ಶ್ರೀಗಳು ಆಶೀರ್ವಚನ ನೀಡುತ್ತಾ ಭರತ ಖಂಡ ಜೀವನಕ್ಕೆ ಸಂಭಂಧಿಸಿದ ಶ್ರೇಷ್ಠವಾದ ಮೌಲ್ಯಗಳಿಗೆ ಜಗತ್ತಿಗೆ ಮಾರ್ಗದರ್ಶನ ಮಾಡಿದೆ. ಇಂದು ಅನಿಷ್ಟ ವಾತಾವರಣ ಉಂಟಾಗಿದೆ. ಮಾನವೀಯ ಗುಣಗಳು ನಶಿಸಿ ಹೋಗಿ ಮಾನವ ದಾನವನಾಗುತ್ತಿದ್ದಾನೆ. ನಮ್ಮ ಭಾರತೀಯ ಧರ್ಮಕ್ಕೆ ಅನುಗುಣವಾಗಿ ನಮ್ಮ ಸಂಸ್ಕೃತಿ ಬೆಳೆಸಿಕೊಂಡು ಸಾಧನಾಪರರಾಗಬೇಕು. ಇಂಥಹ ವ್ಯಕ್ತಿಗಳು ಶಾಲೆಗಳಿಂದ ಹೊರಬರದ ಹೊರತು ಸಮಾಜ ಹಸನಾಗುವುದಿಲ್ಲ ಎಂದು ತಿಳಿಸಿದರು.

ತಾ|| 19-8-84 ರಂದು ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರಿ ಸಮಿತಿಯ ಸಭೆಯು ಸಮಾವೇಶಗೊಂಡಿತ್ತು. ಸಂಘದ ಪುರೋಭಿವೃದ್ಧಿಯ ಬಗ್ಗೆ ಸುದೀರ್ಘ ಚರ್ಚೆನಡೆದು, ಆಜೀವಸದಸ್ಯತ್ವ ಸಂಗ್ರಹಿಸುವ ಕಾರ್ಯ ಸಕ್ರಿಯವಾಗಿ ಮುಂದುವರಿಸಬೇಕೆಂದು ನಿರ್ಣಯಿಸಲಾಯಿತು. ಶ್ರೀ ಮಠದ ಹಳೆಯ ವಿದ್ಯಾರ್ಥಿ ಬಂಧುಗಳನ್ನು ಸಂಘದ ಸಂಪರ್ಕಕ್ಕೆ ಬರುವಂತೆ ಪ್ರಯತ್ನ ಮಾಡಬೇಕೆಂದು ತೀರ್ಮಾನಿಸಲಾಯಿತು.

ಹಳೆಯ ವಿದ್ಯಾರ್ಥಿ ಸಂಘದ ಪ್ರಧಾನಕಾರ್ಯದರ್ಶಿಗಳಾದ ಡಾ|| ಎಂ. ಎನ್. ಚೆನ್ನಬಸಪ್ಪನವರು ಜರ್ಮನಿಯ ತಮ್ಮ ಪ್ರವಾಸವನ್ನು ಮುಗಿಸಿ ಹಿಂದಿರುಗಿದರು. ತಮ್ಮ ಜರ್ಮನಿಯ ಪ್ರವಾಸ ಅನುಭವವನ್ನು ತಾ|| 19-8-84 ರಂದು ಸಂಕ್ಷಿಪ್ತವಾಗಿ ಸಂಘದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ವಿವರಿಸಿದರು.

# ಚಿಂತನ

—ಹರತಿ ವೀರೇಶ

ಅಜ್ಜ ಹಾಕಿದ ಮರ ಮೊಮ್ಮಗನಿಗೆ ಫಲ ಕೊಡುತ್ತದೆ. ಮರಕ್ಕೆ ನೀರುಣಿಸಿ, ಬೇಲಿಕಟ್ಟಿ, ಹುಳ ಉಪ್ಪಟಿಗಳಿಂದ ರಕ್ಷಿಸಿ ಬೆಳೆಸಿದ ಅಜ್ಜನಿಗೆ ಫಲ ಅನುಭವಿಸುವ ಭಾಗ್ಯ ಉಂಟು, ಮೊಮ್ಮಗನಿಗೂ ಉಂಟು ಆದರೆ ಮೊಮ್ಮಗನಿಗೆ ಗೊತ್ತಿಲ್ಲ ಮರ ಬೆಳೆಸುವಲ್ಲಿ ಅಜ್ಜ ಪಟ್ಟ ಶ್ರಮ, ದೂರಾಲೋಚನೆ, ಅದನ್ನು ತಿಳಿದು ಕೃತಜ್ಞತೆಯನ್ನು ಅರ್ಪಿಸುವುದೇ ನಿಜವಾದ ವಿದ್ಯೆ, ಸಂಸ್ಕೃತಿ "ಉಪ್ಪಿಟ್ಟವರನ್ನು ಮುಪ್ಪಿನತನಕ ನೆನೆ" ಎನ್ನುತ್ತದೆ ಗಾದೆ. ಉಪ್ಪು ಅನ್ನದ ಸಂಕೇತ. ಅನ್ನವಿಟ್ಟವರನ್ನ ಜೀವನದುದ್ದಕ್ಕೂ ಕೃತಜ್ಞತೆಯಿಂದ ನೆನೆಯುವುದು ವಿದ್ಯಾವಂತರ ಲಕ್ಷಣ. ಆದರೆ ಆಗುತ್ತಿರುವುದೇನು? ಅನ್ನವಿಟ್ಟ ಮನೆಗೆ ಕನ್ನಹಾಕುವುದು. ಇಂದು ವಿದ್ಯಾವಂತರು ಜಾಣರಾಗುತ್ತಿದ್ದಾರೆ. ಯಾರಾರನ್ನು ಹೇಗೆ ಹೇಗೆ ಎಷ್ಟೆಷ್ಟು ಶೋಷಣೆ ಮಾಡಬಹುದು. ಸ್ವಾರ್ಥ ತುಂಬಿ ಕೊಳ್ಳಬಹುದು ಎನ್ನುವಲ್ಲಿ ಕಲಿತ ವಿದ್ಯೆಯನ್ನು ಬಂಡವಾಳವಾಗಿಸಿ ಕೊಳ್ಳುತ್ತಿದ್ದಾರೆ. ತಾವು ವಿದ್ಯಾವಂತರಾಗುವುದಕ್ಕೆ ಯಾರು ಕಾರಣ, ಯಾರ ಸಹಾಯ ತಮ್ಮನ್ನು ಮುಂದೆ ತಂದಿತು, ಯಾರ ಬಗ್ಗೆ ಹೇಗೆ ನಡೆದುಕೊಳ್ಳಬೇಕು ? ಎಂಬ ಭಾವನೆಗಳೇ ಕಣ್ಮರೆಯಾಗುತ್ತಿವೆ. ಚಿಂತಿಸುತ್ತಾ ಹೋದ ಹಾಗೆಲ್ಲ ನೆನಪಿನ ಸುರುಳಿ ಬಿಚ್ಚಿಕೊಳ್ಳುತ್ತದೆ. ಕವಿ ಹೇಳಿದಂತೆ "ಎನಿತು ಜನ್ಮದಲಿ ಎನಿತು ಜೀವರಿಗೆ ಎನಿತು ಋಣಿಯೋ ನಾವು. ತಿಳಿದು ನೋಡಿದರೆ ಬಾಳು ಎಂಬುದಿದು ಋಣದ ರತ್ನಗಣಿಯೋ" ಅಲ್ಲವೆ? ಎಲ್ಲ ವಿಧದ ಋಣಗಳಿಂದ ಮುಕ್ತನಾದಾಗಲ್ಲವೆ ವಿದ್ಯಾವಂತನೆನಿಸುವುದು.

---

ಅನುಭವವು ಜಗತ್ತಿನ ಕಾರಣವನ್ನು ಹುಡುಕುತ್ತದೆ. ಅನುಭಾವವು ಜಗತ್ತಿನ ಕರ್ತೃವನ್ನು ಹುಡುಕುತ್ತದೆ.

—ಬೇಂದ್ರೆ (ವಿಚಾರಮಂಜರ ಪುಟ-೫೫)

* * * *

ಒಂದು ಸಮಯದಲ್ಲಿ ಶುದ್ಧ ಹೃದಯವು ಏನು ಭಾವಿಸುತ್ತದೆಯೋ ಅದೇ ಸತ್ಯ. ಅದರ ಮೇಲೆ ಅಚಲವಾಗಿ ನಿಂತರೆ ನಿರ್ದುಷ್ಟವಾದ ಸತ್ಯವನ್ನು ಹೊಂದಲು ಸಾಧ್ಯ.

—ಗಾಂಧೀಜಿ

---

# ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಬಂಧುಗಳಲ್ಲಿ

ಒಂದು ವಿನಮ್ರ ಮನವಿ. ಹಳೆಯ ವಿದ್ಯಾರ್ಥಿ ಸಂಘದ ಸದಸ್ಯರಾದ ತಮ್ಮ ಗಮನಕ್ಕೆ ಈ ಸಂತೋಷದ ಸುದ್ದಿ. ತಾವು ಶ್ರೀ ಕ್ಷೇತ್ರದ, ಹಾಗೂ ಸಂಘದ ಅಮೂಲ್ಯ ಸಂಪತ್ತು. ಶ್ರೀ ಶ್ರೀಗಳವರು ಅನುಗ್ರಹಪೂರ್ವಕವಾಗಿ ರೂಪಿಸಿದ ಹಿರಿಯರಾಗಿದ್ದೀರಿ. ತಾವು ಸಂಘದ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗಿಗಳಾಗುತ್ತಿರುವುದಂತೂ; ಕೃತಜ್ಞತಾ ಪೂರ್ವಕವಾಗಿ ಸ್ಮರಿಸಬೇಕಾದ ವಿಚಾರ. ತಮ್ಮ ಸಲುವಾಗಿಯೇ ಸಂಘ ಈಗ "ಆಜೀವ ಸದಸ್ಯತ್ವ"ದ ಮುಕ್ತಾವಕಾಶವನ್ನು ನೀಡಿ ಸ್ವಾಗತಿಸುತ್ತಿದೆ. ಕೇವಲ ಒಂದುನೂರಾ ಒಂದು ರೂಪಾಯಿಗಳನ್ನು ನೀಡಿ ಆಜೀವ ಸದಸ್ಯರಾಗಿ ಸಂಘವನ್ನು ವೃದ್ಧಿಗೊಳಿಸಬೇಕೆಂದು ಪ್ರಾರ್ಥನೆ. ಅಲ್ಲದೆ, ತಮಗೆ ಗೊತ್ತಿರುವ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳನ್ನು ಆಜೀವ ಸದಸ್ಯರನ್ನಾಗಿ ಸಂಘಕ್ಕೆ ನೊಂದಾಯಿಸಬೇಕೆಂದು ವಿನಂತಿ.

**ಈಗಾಗಲೇ ಹಳೆಯ ವಿದ್ಯಾರ್ಥಿ ಸಂಘದ ಶಾಶ್ವತ ಸದಸ್ಯತ್ವ ಪಡೆದಿರುವ ವಿಳಾಸಗಳು.**

(ಜುಲೈ 84 ರ ಸಂಚಿಕೆಯಿಂದ)

ಸರ್ವಶ್ರೀ

ಬಿ. ಚಂದ್ರಶೇಖರಯ್ಯ, ಬಿ.ಇ., ಸಹಾಯಕ, ಅಭಿಯಂತರ, ನಂ. 3, ಹೇಮಾವತಿ ಯೋಜನೆ (ಬಲದಂಡೆ), ನಾಲಾ ಉಪವಿಭಾಗ, ಹೊಳೇನರಸೀಪುರ.

ಡಿ. ಸಿ. ಚಂದ್ರಶೇಖರಯ್ಯ, ಚಿಲ್ಲರೆ ಮತ್ತು ಗೊಬ್ಬರದ ವ್ಯಾಪಾರಿಗಳು, ದೊಡ್ಡಗುಣಿ, ಗುಬ್ಬಿ ತಾಲ್ಲೂಕ್.

ಜಿ. ವೀರಭದ್ರಯ್ಯ, ನಿವೃತ್ತ ಉಪಾಧ್ಯಾಯರು, ಗುಡ್ಡದಹಳ್ಳಿ ಮತ್ತು ಅಂಚೆ, ಮಡಕಸಿರ ತಾಲ್ಲೂಕ್, ಆಂಧ್ರ ಪ್ರದೇಶ.

29 ಶ್ರೀ ಶ್ರೀ ಧರ್ಮರಾಜೇಂದ್ರ ಸ್ವಾಮಿಗಳು, ಸಂಕಲಾಪುರ ಮಠ, ಬೆಳಗೋಡು ಪೋಸ್ಟ್, ಆಲೂರ್ ತಾಲ್ಲೂಕ್.

30 ಎಂ. ನಂಜುಂಡಪ್ಪ, 10/1, 4ನೇ 'ಎ' ಕ್ರಾಸ್, ವಿಜಯನಗರ, ಬೆಂಗಳೂರು–40.

31 ಬಿ. ಜಿ. ನಾಗಬಸಪ್ಪ, ನಂ. 861, 4ನೇ ಮುಖ್ಯ ರಸ್ತೆ, 8ನೇ ಕ್ರಾಸ್, ವಿಜಯನಗರ, ಬೆಂಗಳೂರು-40.

32 ಶ್ರೀ ಶ್ರೀ ಮಹಲಿಂಗ ಸ್ವಾಮಿಗಳು,
ಶ್ರೀ ದೇಗುಲ ಮಠ, ಕನಕಪುರ
ತಾಲ್ಲೂಕ್-562117.

33 ಜಿ. ಹೆಚ್. ಗುರಯ್ಯ, ಶಿವರಾಮ್
ವಿದ್ಯುಚ್ಛಕ್ತಿ ಸ್ಟೋರ್ಸ್, ಶಿರಗುಪ್ಪ
ಮತ್ತು ಅಂಚೆ, ಬಳ್ಳಾರಿ ಡಿಸ್ಟ್ರಿಕ್ಟ್.

34 ಕೆ. ಎಸ್. ಶಿವಲಿಂಗಯ್ಯ,
ಕಂಟ್ರಾಕ್ಟರ್, ಶಿವನಿವಾಸ,
ನಂ. 55 ಎನ್. 1,
ಸಿ.ಐ ಡಿ.ಸಿ.ಓ., ಹೊಸ
ಔರಂಗ ಬಾದ್, ಮಹಾರಾಷ್ಟ್ರ
ರಾಜ್ಯ.

35 ಟಿ. ವೆಂಕಟೇಗೌಡ, ಬ್ಲಾಕ್
ಅಭಿವೃದ್ಧಿ ಅಧಿಕಾರಿ, 5ನೇ
ಮುಖ್ಯ ರಸ್ತೆ, ಸೋಮೇಶ್ವರ
ಪುರಂ, ತುಮಕೂರು.

# ಬಸವಣ್ಣನವರು-೭

(ಮುಂದುವರಿದ ಲೇಖನ)

—ಡಿ॥ ಅ. ನ. ಕೃಷ್ಣರಾಯರು

ಬಸವಣ್ಣನವರು ತಮ್ಮ ಸಾಧನೆಯನ್ನೇ ಗಮನಿಸುತ್ತಾ ಗುಹ್ಯಯೋಗದ ಗುಹೆಯಲ್ಲಿ ಕುಳಿತಿರಲು ಸಾಧ್ಯವಿರಲಿಲ್ಲ. ಅವರ ಮೇಲೆ ಅಪಾರ ಕರ್ತವ್ಯದ ಹೊಣೆಗಾರಿಕೆ ಬಿದ್ದಿತ್ತು. 'ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯ' ಎಂದು ಅವರು ಹೇಳಿದ್ದುದನ್ನೇ ಮಾಡಿ ತೋರಿಸಬೇಕಿತ್ತು. ರಾಜ್ಯಸೂತ್ರವೆಲ್ಲಾ ರಾಜ್ಯಸೇವಾಸಕ್ತ ಅವರ ಕೈಯಲ್ಲಿತ್ತು. ಅದರ ಸದುಪಯೋಗವಮಾಡಿಕೊಂಡು ಪ್ರಜಾಸಂಕುಲಕ್ಕೆ ಅಧಿಕ ಹಿತಪಾಗುವ ರೀತಿಯಲ್ಲಿ ಅದನ್ನವರು ಉಪಯೋಗಿಸಿಕೊಳ್ಳಬೇಕಾಗಿತ್ತು. ಒಂದೆಡೆ ಅಖಂಡವಾದ ಈ ಸಂಸಾರ, ಇನ್ನೊಂದೆಡೆ ಅಧಿಕಸಂಖ್ಯಾತವಾದ ತಮ್ಮ ಶರಣ ಸಂಸಾರ. ಚಿತ್ತೈಕಾಗ್ರತೆಯಿಂದ ರಾಷ್ಟ್ರನಿರ್ಮಾಣ ಮಹಾಕಾರ್ಯದಲ್ಲಿ ಉಜ್ಜುಗಿಸಲೂ ತೆರಪಿಲ್ಲ. ರಾಜಾಸ್ಥಾನದ ತುಂಬ ಕೊಂಡೆಯರು ಪಿಶುಣರು, ಸ್ವಕಾರ್ಯದುರಂಧುರರು. ಅವರು ಒಡ್ಡುತ್ತಿದ್ದ ಪ್ರತಿಬಂಧಕಗಳನ್ನು ನಿವಾರಿಸಿಕೊಂಡು ಮುಂದಡಿಯಿಡಬೇಕಾಗುತ್ತಿತ್ತು.

ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ, ಕಾಲಚೂರ್ಯ ವಂಶವನ್ನು ಪ್ರತಿಯಾಗಿ ನೆಟ್ಟ ಬಿಜ್ಜಳ ಸಾರ್ವಭೌಮ ಅತುಲ ಪರಾಕ್ರಮಿ. ಅವನ ತಂದೆ ಪೇರಮಡಿ, ಮೂರನೆಯ ಸೋಮೇಶ್ವರನ ಕಾಲದಲ್ಲಿ ತರ್ದವಾಡಿ ಎಂಬ ಜಿಲ್ಲೆಯಲ್ಲಿ ಮುಖ್ಯಾಧಿಕಾರಿಯಾಗಿದ್ದನು. ಬಿಜ್ಜಳನ ಮಹತ್ವಾಕಾಂಕ್ಷೆಗೆ ತರ್ದವಾಡಿಯ ಮುಖ್ಯಾಧಿಕಾರತ್ವ ಸಾಲಲಿಲ್ಲ. ಇವನ ಕಾಲದಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ತೈಲಪನು ದುರ್ಬಲನಾಗಿರಲು, ಸಮಯವನ್ನು ಸಾಧಿಸಿ ಅವನನ್ನು ರಾಜಧಾನಿಯಿಂದ ಓಡಿಸಿ ಮಾಂಡಲಿಕನಾದ ಬಿಜ್ಜಳ ತಾನೇ ಸಿಂಹಾಸನವನ್ನಾಕ್ರಮಿಸಿದನು. ಬಿಜ್ಜಳ ವೀರನಾಗಿದ್ದಂತೆ, ರಾಜ್ಯಾಂಗ ನಿರ್ಮಾಣ ಕುಶಲನಾಗಿರಲಿಲ್ಲ. ಪೂರ್ವ ರಾಜರ ಅಭಿಮಾನಿಗಳೂ ಇದ್ದರು. ಅವರು ಗುಪ್ತವಾಗಿ ರಾಜಾದಾಯವನ್ನು ಸ್ವಾಹಾಮಾಡುತ್ತಿದ್ದರು. ರಾಜ್ಯದ ಪ್ರತಿಯೊಂದು ಅಂಗದಲ್ಲಿಯೂ ಬಿಕ್ಕಟ್ಟು, ಶಿಸ್ತುಗಳಿದ್ದ ಹೊರತೂ ರಾಜ್ಯಾಡಳಿತ ಸುಸೂತ್ರವಾಗಿ ಸಾಗುವುದಿಲ್ಲವೆಂಬುದನ್ನು ಬಸವಣನವರು ಅರಿತರು. ಹತ್ತು ವರ್ಷಕಾಲ ಒಂದೇ ಸಮನಾಗಿ ದುಡಿದು ರಾಜ್ಯಭಾರ ಕ್ರಮವನ್ನು ಒಂದು ವಿಧಾಯಕ ಮಾರ್ಗಕ್ಕೆ ತಂದರು. ಅಂಕೆ, ಗಣಿತಗಳಲ್ಲಿ ನಿಸ್ಸೀಮರಾಗಿದ್ದ ಬಸವಣ್ಣನವರನ್ನು ಅಧಿಕಾರಿಗಳು ಮೋಸಗೊಳಿಸಲು ಸಾಧ್ಯವಾಗುತ್ತಿರಲಿಲ್ಲ.

ರಾಜ್ಯದಲ್ಲಿ ಆದಾಯಕ್ಕಿಂತ ವ್ಯಯವೇ ಮಿಗಿಲಾಗಿತ್ತು. ಒಂದು ಕಡೆ ಕಲ್ಪಾಂತರ ವೃಕ್ಷದಂತೆ ಬೆಳೆದುಬಂದಿದ್ದ ಅಧಿಕಾರಿಗಳ ಲಂಚಕೋರತನ ಇನ್ನೊಂದು ಕಡೆ ಅರಸೊತ್ತಿಗೆಯ ಅಮಿತವ್ಯಯ. ದೊರೆ ಒಂದುಲಕ್ಷಐವತ್ತು ಸಾವಿರದ ಸ್ಥಿರ ಸೈನ್ಯವನ್ನು ಸಾಕಿದ್ದನು. ಅದರಲ್ಲಿ ೧೨,೦೦೦ ಕುದುರೆಗಳು, ೧೨,೦೦೦ ರಥಗಳು, ೭೦೦ ಆನೆಗಳಿದ್ದವು. ೧೦೦ ಕೋಟೆಗಳ ಮೇಲ್ವಿಚಾರಣೆಯಾಗಬೇಕಾಗಿತ್ತು. ತನ್ನ ರಾಜ್ಯ ಪರರಿಂದ ಅಪಹೃತವಾದುದೆಂದು ದೊರೆಬಲ್ಲ. ತಾನು ದೊರಕಿಸಿಕೊಂಡಂತೆ ಬೇರೆ ಯಾರಾದರೂ ಧಾಳಿ ನಡಸಿಯಾರು ಎಂಬ ಭಯ ಅವನನ್ನು ಯಾವಾಗಲೂ ಆವರಿಸಿರುತ್ತಿತ್ತು. ಅದಕ್ಕಾಗಿ ರಾಜ್ಯದ ರಕ್ತವನ್ನು ಹೀರುವಂತಹ ಮಹಾಸೈನ್ಯವನ್ನು ಯಾವಾಗಲೂ ಅವನು ನೆಡಸಿಕೊಂಡು ಬರುತ್ತಿದ್ದ. ಲಂಚಕೋರತನದ ಸುಲಿಗೆಯನ್ನು ಬಸವಣ್ಣನವರ ಮಟ್ಟಹಾಕಿ ಆದಾಯವನ್ನು ಸ್ವಲ್ಪಮಟ್ಟಿಗೆ ಏರಿಸಿದರು. ಆದರದು ಸೈನ್ಯರಕ್ಷಣದ ಸುವರ್ಣಹೊಳೆಗೆ ಸರಿಗಟ್ಟಲಿಲ್ಲ. ರಾಜಧಾನಿಯಲ್ಲಿಯೇ ೧೦ ಲಕ್ಷ ಪ್ರಜಾವರ್ಗವಿತ್ತು. ಅವರ ರಕ್ಷಣೆ ಪೋಷಣೆಗಳ ಭಾರವೂ ರಾಜಪ್ರತಿನಿಧಿಯ ಮೇಲೆ ಬಿದ್ದಿತ್ತು.

ಬಸವಣ್ಣನವರು ಪವಾಡಬಲದಿಂದ ರಾಜ್ಯಕೋಶದಲ್ಲಿ ಹೊನ್ನು ತುಂಬುವಂತೆ ಮಾಡುತ್ತಿದ್ದರೆಂದು ಪುರಾಣಕಾರರು ಹೇಳುತ್ತಾರೆ. ಕೋಶಾಗಾರದಲ್ಲಿ ಹೊನ್ನೇನೋ ತುಂಬುತ್ತ ಬಂತು. ಅದು ಅತಿಪ್ರಕೃತಿಕ್ರಿಯೆಯ ಪವಾಡ ದಿಂದಲ್ಲ, ರಾಜ್ಯತಂತ್ರ ಕುಶಲನ ಕೈವಾಡದಿಂದ. ಬಸವಣ್ಣನವರು ೧೩ ಹೊಸ ತೆರಿಗೆಗಳನ್ನು ನಿಯೋಜಿಸಿದರು

೧. ಬಂಕದೆರೆ : ಬಲಿಷ್ಠರಾದ ಉಂಡಾಂಡಿಗರು ಭಿಕ್ಷುಕವೃತ್ತಿಯನ್ನೇ ಒಂದು ಕಾಯಕ ಮಾಡಿಕೊಂಡಿದ್ದರು. ಅವರು ಸಮಾಜರಕ್ತೋಪಜೀವಿಗಳಾಗಿದ್ದುದಲ್ಲದೆ ಸಮಾಜ ಶಾಂತಿಗೆ ಭಂಗತರುತ್ತಲೂ ಇದ್ದರು. ಅವರನ್ನು ಒತ್ತಾಯದಿಂದ ಕೆಲಸಕ್ಕೆ ಹಚ್ಚುವುದು, ಅವರ ಕಡೆಯಿಂದ ಹಾದಿಗಳನ್ನೇರ್ಪಡಿಸುವುದು, ದಟ್ಟ ಅರಣ್ಯವನ್ನು ಕಡಿಸಿ ನೆರೆಹೊರೆಯ ಹಳ್ಳಿಗಳಿಗೆ ಮೃಗಗಳ ಭೀತಿಯನ್ನು ತಪ್ಪಿಸುವುದು. ಬಂಜರು ಬಿದ್ದಿದ್ದ ಭೂಮಿಯನ್ನು ಬೇಸಾಯಕ್ಕೆ ಹದಗೊಳಿಸುವುದು ಇತ್ಯಾದಿ ವೃತ್ತಿಗಳನ್ನು ಮಾಡಿಸಲಾಗುತ್ತಿತ್ತು. ಅಶಕ್ತರಾದ ಭಿಕ್ಷುಕರ ಯೋಗಕ್ಷೇಮವನ್ನು ಸರ್ಕಾರ ನಿರ್ವಹಿಸುತ್ತಿತ್ತು.

೨. ಸಿದ್ಧಾದಾಯ : ಆಶ್ರಿತ ಸಂಸ್ಥಾನಿಕರಿಂದ ಬರುವ ಕಪ್ಪಕಾಣಿಕೆ. ಇದು ಆಶ್ರಿತರ ಆದಾಯದಲ್ಲಿ ಅರ್ಧಭಾಗವಾಗುತ್ತಿತ್ತು.

೩. ಬಿಟ್ಟಿಕೊಟ್ಟಣ : ವಿಶೇಷ ಸಂದರ್ಭಗಳಲ್ಲಿಯೂ ಯುದ್ಧಕಾಲದಲ್ಲಿಯೂ

ಪ್ರತಿಮನೆಯೂ ಪ್ರತಿನಿಧಿಗಳನ್ನು ಕಳುಹಿಸಿ ರಾಜ್ಯದ ಕೆಲಸವನ್ನು ಪ್ರತಿಫಲಾಪೇಕ್ಷೆ ಯಿಲ್ಲದೆ ಮಾಡಬೇಕಾಗುತ್ತಿತ್ತು.

೪. ಅಂಕೆಯ ಸೊಲ್ಲಿಗೆ: ತಮ್ಮ ಯೋಗ್ಯತಾನುಸಾರ ಅನುಕೂಲಸ್ಥರು ರಾಜನಿಗೆ ವಿಶೇಷ ಸಂದರ್ಭಗಳಲ್ಲಿ ಮರ್ಯಾದೆ (ನಜರ್) ಸಲ್ಲಿಸಬೇಕಾಗುತ್ತಿತ್ತು.

೫. ಕವಣೆ : ವಿದ್ಯಾಭ್ಯಾಸದ ತೆರಿಗೆ.

೬. ಕಡ್ಡಾಯದಂಕೆ : ಗೊಡ್ಡು ಪಶುಗಳ ಮೇವಿನ ಸುಂಕ.

೭. ಅಪುತ್ರಿಕೆ: ಅಸ್ವಾಮ್ಯದ ಸೊತ್ತುಗಳು ರಾಜ್ಯಕೋಶಕ್ಕೆ ಸೇರುತ್ತಿದ್ದವು.

೮. ದಂತೆ: ಬಂಜರು ಭೂಮಿಗಳಿಗೆ ನೀರುಹಾಯಿಸಿ ಅವು ಸಾಗುವಳಿಗೆ ಅನುಕೂಲವಾಗುವಂತೆ ಏರ್ಪಡಿಸುವುದರ ಮೇಲಣ ಸುಂಕ.

೯. ಉಂಡಿಗೆ: ಸುಖಸಾಧನಗಳ ಮೇಲಣ ಸುಂಕ.

೧೦. ಸುಂಕೆ: ಆಮದು ರಫ್ತಾಗುವ ಸಮಾನುಗಳ ಮೇಲಣ ಸುಂಕ.

೧೧. ತಳವರಿಕೆ: ಭೂಮಿಯ ರಕ್ಷಣದ ಮೇಲಣ ಸುಂಕ.

೧೨. ಗುತ್ತಿಗೆ: ಭೂಮಿಯನ್ನು ಸಾಗುವಳಿಗೆ ಗುತ್ತಿಗೆ ತೆಗೆದುಕೊಳ್ಳುವುದರ ಮೇಲಣ ಕರ.

ಬಸವಣ್ಣನವರ ಕಾಲದಲ್ಲಿ ಬೆಳ್ಳಿ, ತಾಮ್ರದ ನಾಣ್ಯಗಳು ಚಲನೆಯಲ್ಲಿದ್ದವು. ಅವರು ಸುಮಾರು ೫೦೦ರೂಪಾಯಿ ಬೆಲೆಬಾಳುವ 'ಬಸವನ ಮುದ್ರೆಯವರಹ' ಎಂಬ ಬಂಗಾರದ ನಾಣ್ಯವನ್ನು ಹೊರಡಿಸಿದರು. ಇದರಿಂದ ಪರಪ್ರಾಂತ್ಯಗಳೊಂದಿಗೆ ವ್ಯಾಪಾರ ವ್ಯವಹಾರಗಳಿಗೆ ತುಂಬ ಇಂಬು ದೊರಕಿತು.

ವಿದ್ಯಾ ಪ್ರಸಾರಕ್ಕೆ ಬಸವಣ್ಣನವರು ವಿಶೇಷ ಲಕ್ಷ್ಯವಿತ್ತರು. ಕಾಯಕಗಳೆಲ್ಲಾ ಒಂದೇ ಎಂದು ಸಾರಿ ಪರಂಪರಾಗತವಾಗಿ ಕಾಯಕಗಳನ್ನವಲಂಬಿಸುತ್ತ ಬಂದಿದ್ದವರು ತಮ್ಮ ಕಾಯಕಗಳಲ್ಲಿ ಹೆಚ್ಚು ಕೌಶಲ್ಯವನ್ನು ದೊರಕಿಸಿಕೊಳ್ಳುವುದಕ್ಕೆ ಅನುಕೂಲಗಳನ್ನೇರ್ಪಡಿಸಿದರು. ಹೊಸದಾಗಿ ಕಾಯಕಗಳಿಗೆ ಪ್ರವೇಶಿಸುವುವರಿಗೆ ಅನುಕೂಲಿಸಲು ವೃತ್ತಿಶಿಕ್ಷಣಾಲಯಗಳನ್ನು ತೆರೆದರು. ಗ್ರಾಮಾಂತರಗಳಲ್ಲಿ ಪಳ್ಳಿಕೂಟಗಳನ್ನೇರ್ಪಡಿಸಿ ಓದುಬರೆಹವನ್ನು ಜನಸಾಮಾನ್ಯಕ್ಕೆ ಕಲಿಸುವ ವ್ಯವಸ್ಥೆಯನ್ನು ಮಾಡಿದರು. ಅವರು ಸ್ಥಾಪಿಸಿದ ಅನುಭವಮಂಟಪ ಒಂದು ದೃಷ್ಟಿಯಲ್ಲಿ ಶಿಕ್ಷಕರ ಶಿಕ್ಷಣಕೇಂದ್ರವಾಗಿತ್ತು. ಅಲ್ಲಿ ನುರಿತ ನೂರಾರು ಜಂಗಮರು. ಶರಣರು ದೇಶದಲ್ಲಿ ಪ್ರವಾಸ ಮಾಡಿ, ಹಳ್ಳಿಗಳಲ್ಲಿ ಕೆಲವು ದಿವಸ ತಂಗಿ ಜನಗಳಿಗೆ ಧರ್ಮ, ನೀತಿ ಪ್ರಸಾರಮಾಡುತ್ತಿದ್ದರು. ಹಳ್ಳಿಗಳನ್ನೆಲ್ಲಾ ಬರಿದುಮಾಡಿ, ಹಳ್ಳಿಗಳ ಪರಂಪರಾಗತವಾದ ಕೃಷಿ ಕೈಗಾರಿಕೆಗಳನ್ನು

ನಿರ್ಮೂಲವಮಾಡಿ, ಅವರನ್ನು ಪಟ್ಟಣದಲ್ಲಿ ಕೂಡಿಹಾಕಿಕೊಂಡ ನಿರುದ್ಯೋಗಿಗಳನ್ನು ಹೆಚ್ಚಿಸುವ ಕೆಲಸಕ್ಕೆ ಬಸವಣ್ಣನವರು ಕೈಹಾಕಲಿಲ್ಲ. ಎಲ್ಲರೂ ಇದ್ದಲ್ಲಿಯೇ ಜ್ಞಾನ ಲಾಭವನ್ನೂ, ತಮ್ಮ ವೃತ್ತಿಗನುಕೂಲವಾಗುವ ವಿಶೇಷ ಪರಿಜ್ಞಾನವನ್ನು ಹೊಂದು ವುದೂ, ಜೀವನವನ್ನು ಹಸನು ಮಾಡಿಕೊಳ್ಳುವುದಕ್ಕೆ ನೀತಿ ಧರ್ಮಗಳ ಶಿಕ್ಷಣವನ್ನೂ ಪಡೆಯುವುದವಶ್ಯಕವೆಂದು ನಂಬಿ ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಲುದ್ಯುಕ್ತ ರಾದರು.

ಬಸವಣ್ಣನವರ ರಾಜ್ಯಧೋರಣವೆಲ್ಲಾ ಸಾಮ್ಯವಾದದ ಕಡೆಗೆ ಅವಲಂಬಿಸಿ ತ್ತೆಂದು ಕಾಣಬರುತ್ತದೆ. ದೇಶದ ಶ್ರೀಮಂತರು ತಮ್ಮ ಉಳಿತಾಯದ ಹಣವನ್ನು ರಾಷ್ಟ್ರಕ್ಕೆ ನೀಡಬೇಕು. ಅವರು ತಾವಾಗಿಯೇ ಕೊಡುವುದಕ್ಕೆ ಹಲವು ಸಾಧನ ಗಳಿದ್ದವು. ಧನಲೋಭದಿಂದ ಇದಕ್ಕೆ ಸಗ್ಗದವರಿಂದ ಸರ್ಕಾರ ಬೇರೆ ರೀತಿಯಲ್ಲಿ ಹಣ ವನ್ನು ಸೆಳೆದು ರಾಷ್ಟ್ರಕಾರ್ಯಕ್ಕೆ ವಿನಿಯೋಗಿಸುತ್ತಿತ್ತು. ಪ್ರತಿನಿತ್ಯ ಸಹಸ್ರಾರು ಜಂಗಮರಿಗೆ ದಾಸೋಹ ನಡೆಸಿ ಬಸವಣ್ಣನವರು ತಮ್ಮ ಸಂಪಾದನೆಯನ್ನು ದೀನ, ದರಿದ್ರ, ದುಃಖಿಗಳಿಗೆ ನಿವೇದನ ಮಾಡಿಬಿಟ್ಟಿದ್ದರು. ಅವರ ರಾಜನೀತಿಯನ್ನು ಯಾರೂ ಖಂಡಿಸುವಂತಿರಲಿಲ್ಲ. ರಾಜ್ಯದ ದ್ರವ್ಯವನ್ನಪಹರಿಸುತ್ತಾರೆಂದು ಅವರನ್ನು ಯಾರೂ ದೂಷಿಸುವಂತಿರಲಿಲ್ಲ. ಇಂತಹ ನಿಷ್ಕಳಂಕ ಜೀವಿಯನ್ನೂ ಸ್ವಾರ್ಥಸಾಧಕರು ಬಿಟ್ಟಿರಲಿಲ್ಲ. ರಾಜ್ಯ ಭಂಡಾರವನ್ನು ಸೂರೆಹೊಡೆದು ಜಂಗಮ ದಾಸೋಹವಮಾಡಿ, ಪುಂಡರ ಬಳಗವನ್ನು ಪ್ರಧಾನಿಗಳು ಕೂಡಿಸುತ್ತಿದ್ದಾರೆಂಬ ದೂರು ಆಗಾಗ್ಗೆ ರಾಜನ ಕಿವಿಯ ಮೇಲೆ ಬೀಳುತ್ತಿತ್ತು. ಕೆಲವು ಸಲ ಅದನ್ನು ಪರೀಕ್ಷಿಸ ಹೋಗಿ ರಾಜ ಪರಾ ಜಯ ಹೊಂದಿ ಕೊಂಡೆಯವರನ್ನು ಸ್ವಲ್ಪ ದೂರದಲ್ಲಿಯೇ ಇಡುತ್ತಿದ್ದನು. ಇಂತಹ ಸನ್ನಿವೇಶಗಳು ಮೇಲಿಂದ ಮೇಲೆ ಬರುತ್ತಿದ್ದವೆಂದೂ, ಬಸವಣ್ಣನವರು ತಮ್ಮ ಅತಿ ಮಾನುಷಿಕ ಶಕ್ತಿಯಿಂದ ಪವಾಡಗಳನ್ನು ಮೆರೆಯಿಸಿ ಕೊಂಡೆಯರನ್ನೂ ಅವರನ್ನು ನಂಬಿದ ಅರಸನನ್ನು ಮುಖ ಕೆಡಿಸುತ್ತಿದ್ದರೆಂದೂ ಊಹಿಸುವುದು ತಪ್ಪು. ಬಸವಣ್ಣ ನವರಿಗೂ ಬಿಜ್ಜಳನಿಗೂ ವೈಯಕ್ತಿಕವಾದ ಅನೇಕ ಭೇದಗಳಿದ್ದವು. ಅವರಿಬ್ಬರೂ ಬೇರೆ ಬೇರೆ ಪಂಥಗಳಿಗೆ ಸೇರಿದವರು. ಬಸವಣ್ಣನವರ ಪ್ರತಿಯೊಂದು ಕೆಲಸವನ್ನೂ ಬಿಜ್ಜಳ ಸಹಾನುಭೂತಿಯಿಂದ ನೋಡಲು ಸಾಧ್ಯವಾಗುತ್ತಿರಲಿಲ್ಲ. ಅವರ ಸಾಮಾನ್ಯ ಜೀವನ ಸ್ಥಾನಮರ್ಯಾದೆಯನ್ನೂ ಪರಿಗಣಿಸಿದ ಸಾಮ್ಯವಾದ, ಇತಿಮಿತಿಯಿಲ್ಲದ ದಾನಧರ್ಮ ಅರಸನಿಗೆ ಕೊಂಚ ವ್ಯತಿರೇಕವಾಗಿ ಕಂಡಿರಬಹುದು. ಆದರೆ ಬಸವಣ್ಣ ನವರ ಹೃದಯವನ್ನು ಬಲ್ಲ ಬಿಜ್ಜಳ ಈ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳನ್ನು ಬೆಳಸಿ ತಮ್ಮ ಮಧುರ ಬಾಂಧವ್ಯ ಕೆಡಲು ಅವಕಾಶ ಕೊಡಲಿಲ್ಲ. ಬಸವಣ್ಣನವರು ಅವನ ಆಶ್ರಯದಲ್ಲಿದ್ದರೂ ಪೂರ್ಣ ಸ್ವತಂತ್ರರಾಗಿದ್ದರು. ಅವರ ಮಾತಿಗೆ ಪ್ರತಿಹೇಳುವವರಿಲ್ಲ, ಕೈ ತಡೆಯುವವರಿಲ್ಲ.

ರಾಜ್ಯದ ಬಂಡವಾಳಗಾರರೂ, ಸುಲಿಗೆಯ ಕಾಯಕದವರೂ, ಪರಂಪರಾಗತವಾಗಿ ಅಧಿಕಾರ ಸ್ಥಾನಗಳನ್ನಾಕ್ರಮಿಸಿದ್ದವರೂ ಒಂದು ಗುಂಪಾಗಿ ಬಸವಣ್ಣನವರ ಮೇಲೆ ಕತ್ತಿ ಮಸೆಯುತ್ತಲೇ ಇದ್ದರು. ಈ ಸಾಮ್ಯವಾದಿ ಪ್ರಧಾನಿ ತಮ್ಮ ಭಂಡಾರವನ್ನು ಬರಿದುಮಾಡಿದ್ದ; ಊರಿನ ಕಾಳಿ ಕಂಗಾಳಿಗಳಿಗೆಲ್ಲಾ ಸಮಾನ ಸ್ಥಾನವನ್ನಿತ್ತು ತಮ್ಮ ಪ್ರತಿಷ್ಠೆಗೆ ಧಕ್ಕೆ ತಂದಿದ್ದ; ಜನತೆಯ ಅಜ್ಞಾನದ ಸದುಪಯೋಗ ಮಾಡಿಕೊಂಡು ತಾವು ಗಳಿಸುತ್ತಿದ್ದುದನ್ನು ಮುರಿದಿದ್ದ, ಈ ಸುಧಾರಣೆಗಳು ಅವರ ಅಭಿರುಚಿಗೆ ತೀರಾ ವಿರುದ್ಧವಾಗಿದ್ದವು. ಬಸವಣ್ಣನವರ ದಾಸೋಹ ಪಂಥಕ್ಕೆ ಸೇರಿದ್ದ ಸಾವಿರಾರು ಜನ ಅವರನ್ನು ಅತಿಯಾಗಿ ಹೊಗಳಿಕೊಂಡು ತಿರುಗುತ್ತಿದ್ದುದೂ, ಕೆಲವರು ಬಸವಣ್ಣನವರ ಹೆಸರನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದುದೂ, ವಿರೋಧಿಗಳಿಗೆ ಸಾಕ್ಷ್ಯಗಳನ್ನೊದಗಿಸುತ್ತಿದ್ದವು.

ಇವುಗಳ ಕಡೆಗೆ ಲಕ್ಷ್ಯಕೊಡುವುದಕ್ಕೆ ಬಸವಣ್ಣನವರಿಗೆ ವ್ಯವಧಾನವಿಲ್ಲ. ಕೈತುಂಬ ರಾಜ್ಯದ ಕೆಲಸ - ಜತೆಗೆ ಕೂಡಲಸಂಗಮನ ಚಿಂತೆ.

"ಪರ ಚಿಂತೆ ನಮಗೇಕಯ್ಯ ?
ನಮ್ಮ ಚಿಂತೆ ನಮಗೆ ಸಾಲದೇ ?
ಕೂಡಲಸಂಗಯ್ಯ ಒಲಿದಾನೋ, ಒಲ್ಲನೋ
ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು."

ಪರರ ಚಿಂತೆಯ ಮಾತು ಹಾಗಿರಲಿ, ಸ್ವಚಿಂತನೆ ಮಾಡುವುದಕ್ಕೂ ಅವಕಾಶವಿಲ್ಲ. ದಯೆಯೇ ಮೂರ್ತಿವೆತ್ತು ಬಂದಂತಿದ್ದ ಬಸವಣ್ಣನವರಿಗೆವೇಳೆ ವಿಶ್ರಾಮಗಳು ದೊರೆಯುತ್ತಿರಲಿಲ್ಲ.

ದಯೆ, ಜೀವಕಾರುಣ್ಯ, ಅಹಿಂಸೆ ಬಸವಣ್ಣನವರ ಜೀವನದ ಎಲ್ಲಾ ರಂಗಗಳಲ್ಲಿಯೂ ಲಾಸ್ಯವಾಡುತ್ತಿದೆ. ನಾನು ನಿಷ್ಠುರಿ' ಕರಣಾಮಯರೂ ಬೇರೊಬ್ಬರಿರಲಿಲ್ಲ. ಅವರ ರಾಜಕೀಯ, ಸಾಮಾಜಿಕ ವ್ಯವಹಾರಗಳನ್ನು ಕೂಡ ದಯಾಮಯತೆಯೇ ಆಳಿಕೊಂಡು ಹೋಗಿದೆ.

''ಅಯ್ಯಾ ಎಂದೆಡೆ ಸ್ವರ್ಗ
ಎಲವೋ ಎಂದೆಡೆ ನರಕ.''
"ಏನು ಬಂದಿರಿ, ಹದುಳವಿದ್ದಿರೆಂದರೆ, ನಿಮ್ಮ ಮೈಸಿರಿ ಹಾರಿಹೋಹುದೇ ?
ಕುಳ್ಳಿರೆಂದರೆ ನೆಲ ಕುಳಿಹೋಹುದೇ ?
ಒಡನೆ ನುಡಿದರೆ ಶಿರ ಹೊಟ್ಟೆಯೊಡೆವುದೇ ?

ಕೊಪಲಿಲ್ಲದಿದ್ದರೆ ಒಂದು ಗುಣವಿಲ್ಲದಿದ್ದರೆ ಮೂಗ ಕೊಯ್ಯದೆ
ಮಾಣ್ಬನೇ ಕೂಡಲಸಂಗಮದೇವಯ್ಯ."

ಸಾಮಾನ್ಯ ವ್ಯವಹಾರದಲ್ಲಿ ಕೂಡ ಒಬ್ಬರಿಗೆ ಒಂದು ಬಿರುಸು ಮಾತಾಡಲು ಅಣ್ಣನವರ ಮನಸ್ಸು ಅಳುಕುತ್ತಿತ್ತು, ಅಂಜುತ್ತಿತ್ತು. ಬಸವಣ್ಣನವರ ದಾಸೋಹದಲ್ಲಿ ಶಿವಶರಣರಿಗೆ ಸಿಕ್ಕುತ್ತಿದ್ದ ಹೇರಳ ಲಾಭವನ್ನು ಕಂಡು ಆಶಿಸಿ ಒಂದು ದಿನ ಕೆಲವು ಕಳ್ಳರು ಶಿವಭಕ್ತರಂತೆ ವೇಷಧರಿಸಿ, ಲಿಂಗಗಳು ದೊರೆಯದಿರಲು ಬದನೆಕಾಯಿಯನ್ನು ಹೋಳುಮಾಡಿ ಲಿಂಗದ ಹಾಗೆ ಕಟ್ಟಿ ಕೊಂಡು ಬರುತ್ತಾರೆ. ಪೂಜಾಸಮಯದಲ್ಲಿ ಅವರ ಮೋಸ ಬಯಲಿಗೆ ಬೀಳುತ್ತದೆ. ಬಸವಣ್ಣನವರು ದಂಡ ಧರಿಸಿ ಅವರನ್ನು ಶಾಸನಕ್ಕೆ ಗುರಿ ಮಾಡದೆ ಅವರನ್ನು ಮನ್ನಿಸಿ, ದಾನ ಧರ್ಮಗಳಿಂದ ಸತ್ಕರಿಸಿ ನಿಜಶರಣರನ್ನಾಗಿ ಮಾರ್ಪಡಿಸುತ್ತಾರೆ. ಅವರು ಶಾಸನಕ್ಕೆ ಗುರಿಯಾಗಿದ್ದರೆ ಅವಧಿ ತೀರಿದ ನಂತರ ಅದೇ ವೃತ್ತಿಯನ್ನವಲಂಬಿಸಿ ಸಮಾಜಕಂಟಕರಾಗುತ್ತಿದ್ದರು. ಅಂತಹವರನ್ನು ಸಮಾಜಸೇವಕರನ್ನಾಗಿ ಬಸವಣ್ಣನವರ ದಯೇ ಮಾರ್ಪಡಿಸಿತು. ಮತ್ತೊಮ್ಮೆ ಕೆಲವು ಕಳ್ಳರು ಊರಿನ ಗೋವುಗಳನ್ನು ಹೊಡೆದುಕೊಂಡು ಹೋಗುತ್ತಾರೆ. ಬಸವಣ್ಣನವರಿಗಾಗ ಅಪಾರ ದುಃಖವಾಯಿತು. ಗೋವುಗಳು ಕಳೆದುಹೋದುವೆಂದಲ್ಲ; ಕರುಗಳಿಗೇನು ಗತಿಯೆಂದು ! ಗೋವುಗಳ ಬಳಿಗೆ ಕರುಗಳನ್ನು ಬಿಟ್ಟು ಬನ್ನಿಯೆಂದು ಕಳುಹಿಸುತ್ತಾರೆ. ಕಳ್ಳರಲ್ಲಿ ಪರಿವರ್ತನೆಯಾಗುತ್ತದೆ. ಅವರು ಕದ್ದೊಡವೆಯನ್ನು ತಂದು ಹಿಂದಕ್ಕೊಪ್ಪಿಸಿ ಶರಣಗತರಾಗುತ್ತಾರೆ. ಇನ್ನೊಮ್ಮೆ ಹಾಲಹರವಿಯನು ಹೊತ್ತು ಹೋಗುತ್ತಿದ್ದ ಗೊಲ್ಲತಿಯೊಬ್ಬಳು ನಡೆದು ಹೋಗುತ್ತಾ ಜಾರುತ್ತಾಳೆ. 'ಬಸವಾ' ಎಂದು ಕೂಗುತ್ತಾಳೆ. ಹಿಂದೆ ಬರುತ್ತಿದ್ದ ಬಸವಣ್ಣನವರು ತಮ್ಮ ಪದವಿಯನ್ನೂ ಲೆಕ್ಕಿಸದೆ ಆಕೆಯನ್ನು ಹಿಡಿದು ಕಾಪಾಡುತ್ತಾರೆ. ಎಲ್ಲ ಧರ್ಮಗಳೂ ಸಾರುವ ದಯೆಯ ಘನತ್ವವನ್ನೇ ಬಸವಣ್ಣನವರು,

ದಯೆಯಿಲ್ಲದ ಧರ್ಮವದಾವುದಯ್ಯ
ದಯೆಯೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ"

ಎಂದು ತಮ್ಮ ತಿಳಿನುಡಿಯಲ್ಲಿ ಹೇಳಿದ್ದಾರೆ. ದಯಾಮಯತೆಯಲ್ಲಿ ಬಸವಣ್ಣನವರು ಬುದ್ಧ, ಕ್ರಿಸ್ತ, ರಾಮಾನುಜರ ಸಮಾನಸ್ಕಂದರಾಗುತ್ತಾರೆ. ತಮ್ಮ ಮಹಾಕಾವ್ಯವನ್ನು ಅರಕ್ಷರಶಃ ಜೀವನದಲ್ಲಿ ಆಚರಿಸಿ ತೋರಿಸಿ ಲೋಕಕ್ಕೆ ಮಾದರಿಯಾಗಿದ್ದಾರೆ. ಸಾಮಾನ್ಯವಾಗಿ ಕಾಣುವ ಅಸಾಮಾನ್ಯ ಗುಣವೇ ಮಾನವನ ಸಕಲ ಕಲ್ಯಾಣಕ್ಕೂ ಮೂಲವೆಂದು ಬಸವಣ್ಣನವರು ದೃಢವಾಗಿ ನಂಬಿದ್ದರು.

ತಮ್ಮನ್ನು ತಾವು ಸುಧಾಹರಿಸಿಕೊಂಡು, ತಮ್ಮ ಕಲ್ಯಾಣಕ್ಕೆ ಹೇತುವಾದ

ಮಾರ್ಗವನ್ನವಲಂಭಿಸಿ ಸಿದ್ಧರಂತೆ ತಮ್ಮ ಮೋಕ್ಷವನ್ನು ಸಾಧಿಸಿಕೊಂಡು ಹೋಗು ವುದು ಬಸವಣ್ಣನವರಿಗೆ ಅಷ್ಟು ಪ್ರಿಯವಾಗಿರಲಿಲ್ಲ. 'ನನ್ನ ಈ ಎಲ್ಲ ಬಂಧು ಭಗಿನಿಯರು ಅಜ್ಞಾನದಲ್ಲಿ, ಅಂಧಕಾರದಲ್ಲಿ, ರೂಢಿಯ ಕಾರ್ಗತ್ತಲೆಯಲ್ಲಿ ಬಿದ್ದಿರುವಾಗ ಅವರನ್ನುಳಿದು ನಾನು ಕೈಲಾಸಕ್ಕೆ ಹೋಗುವುದೇ' ಎಂಬ ನೋವು ಬಸವಣ್ಣನವರ ಹೃದಯವನ್ನು ಹಿಂಡಿತು.

ಧರ್ಮಸಂಸ್ಥಾಪನೆ

ಬಸವಣ್ಣನವರು ಕಾಲಕಾಲಕ್ಕೆ ದಿವ್ಯವಾದ ನುಡಿಗಳನ್ನು ನುಡಿದು ಜನರನ್ನು ಎಚ್ಚರಿಸುತ್ತ ಬಂದರು. ತಪ್ಪುದಾರಿಯಲ್ಲಿ ಹೋಗುತ್ತಿದ್ದವರನ್ನು ಅಣ್ಣನಂತೆ ಕೈ ಹಿಡಿದು ಋಜುಮಾರ್ಗದೆಡೆಗೆ ತಿರುಗಿಸುತ್ತ ಬಂದರು. ತತ್ವಾರ್ಥ ಪರಿಜ್ಞಾನಕ್ಕೆ ಧರ್ಮಗ್ರಂಥಗಳ ನೆರವು ಬೇಕು, ಅದಕ್ಕೂ ಹಿರಿದಾಗಿ ಸಾಧಕರ ಮೆಲ್ಪಂಕ್ತಿ ಬೇಕು. ಇವೆರಡಕ್ಕಿಂತ ಹೆಚ್ಚಾಗಿ ಭಕ್ತ ತನ್ನ ಅನುಭಾವದಿಂದಲೇ ಬೆಳಕು ಕಂಡುಕೊಳ್ಳಬೇಕು. ಧರ್ಮಗ್ರಂಥಗಳೂ, ಆದ್ಯರ ವಚನಗಳೂ ಭಕ್ತನನ್ನು ಅನುಭವದ ಬಳಿಗೆ ಮಾತ್ರ ಕೊಂಡು ಹೋಗಬಲ್ಲವು. ಪಾಕಮಾಡಿ ಅವನು ಭುಜಿಸಲು ಪದಾರ್ಥಗಳನ್ನು ಮುಂದಿಡಬಲ್ಲವು, ಆದರೆ ಭುಜಿಸುವ ಕೆಲಸವನ್ನು ಅವನೇ ಮಾಡಬೇಕಾಗುತ್ತದೆ.

"ತನ್ನಾಶ್ರಯದ ರತಿಸುಖವನು ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲು ಮಾಡಬಹುದೇ
ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ,
ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೇ ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ."

ವೇದಗಳ ಕರ್ಮಕಾಂಡವನ್ನು ಬಸವಣ್ಣನವರು ಸ್ಪಷ್ಟವಾಗಿ ಖಂಡಿಸಿದರೂ ಉಪನಿಷತ್ತಿನ ದಿವ್ಯವಾಣಿಗೆ ಅವರ ಮನಸ್ಸು ಮಾರುಹೋಗದಿರಲಿಲ್ಲ. ಉಪನಿಷತ್ತಿನ ಋಷಿಗಳು ಯಾವ ಆಧ್ಯಾತ್ಮಿಕ ಉತ್ಕ್ರಾಂತಿಗೆ ಸಿಕ್ಕಿ ತಾವು ಕಂಡ ಸತ್ಯವನ್ನು ಹೊರಗೆಡಹಿದರೋ ಅದೇ ಅನುಭವವನ್ನು ಕ್ರಿಸ್ತ, ಪೈಗಂಬರ್ ಮಹಮದ್, ಜಾರತುಷ್ಟ್ರ ಬಸವೇಶ್ವರ ಇದರ ಜೀವನಗಳಲ್ಲಿಯೂ ಕಾಣುತ್ತೇವೆ. ಒಬ್ಬರಿಂದ ಒಬ್ಬರು ಈ ವಿಚಾರವನ್ನೆತ್ತಿಕೊಂಡರು ಎಂದು ಊಹಿಸುವುದು ವಿಚಾರಕ್ಕೆ ದೂರವಾಗುತ್ತದೆ. 'ಏಕಂ ಸತ್ ವಿಪ್ರಾ ಬಹುಧಾವದಂತಿ' ಎಂದು ಉಪನಿಷತ್ ಸಾರಿತು; ಕುರಾನ್, ಬೈಬಲ್, ಅವೆಸ್ತಾಗಳಲ್ಲಿಯೂ ಇದೇ ಸತ್ಯಘೋಷಣೆಯಿದೆ. ಬಸವಣ್ಣನವರು 'ದೇವನೊಬ್ಬ ನಾಮ ಹಲವು' ಎಂದು ಹೇಳಿದರು. ಹಿರಿಯರು ಹೇಳಿದ ಮಾತುಗಳನ್ನು ತಮ್ಮ ಪಾಂಡಿತ್ಯ ಪ್ರದರ್ಶನಕ್ಕಾಗಿ ಗಿಳಿಪಾಠದಂತೆ ಆಡುವವರ ಬಗ್ಗೆ ಭಾವಚೌರ್ಯವನ್ನಾರೋಪಿಸಬಹುದಲ್ಲದೆ ಸತ್ಯದ ಯಜ್ಞಶಾಲೆಯಲ್ಲಿ ದೀಕ್ಷೆ ಪಡೆದು ಕುಳಿತ ತಪಸ್ವಿಗಳ

ಬಗ್ಗೆ ಇಂತಹ ಮಾತನ್ನಾಡುವುದು ಉಚಿತವೆನಿಸುವುದಿಲ್ಲ. ಉಪನಿಷತ್ತು ಆಗಮಗಳಲ್ಲಿನ ತತ್ತ್ವಾರ್ಥವನ್ನು ಬಸವಣ್ಣನವರು ತಿಳಿದಿದ್ದರು. ಅವುಗಳನ್ನು ಸಂದರ್ಭೋಚಿತವಾಗಿ ಅವರು ಬಳಸಿಕೊಂಡಿರಲೂ ಬಹುದು. ಆದರೆ ತಮ್ಮ ವಿಚಾರ, ಅನುಭವಗಳಿಗೆಟಕುವ ತತ್ತ್ವಾರ್ಥವನ್ನು ಮಾತ್ರ ಸ್ವೀಕರಿಸಿ ಇತರ ವಿಷಯಗಳನ್ನು ಅವರು ನಿರಾಕರಿಸಿದ್ದಾರೆ.

ಬಸವಣ್ಣನವರು ಜಗತ್ತಿಗೆ ಹೊಸ ಧರ್ಮವನ್ನು ಬೀರಿದರೇ ? ಹಿಂದಿನವರು ಹೇಳಿದ ವಿಷಯವನ್ನು ಪ್ರತಿಪಾದಿಸಿ ಜ್ಞಾನದ ಹೊಸ ಬಾಗಿಲುಗಳನ್ನು ತೆರೆದರೇ ? ಅನಂತವಾದ ಧರ್ಮಕ್ಕೆ ಹೊಸತು, ಹಳೆಯದರ ಹೊದಿಕೆಯನ್ನು ಹೊದಿಸುವುದೇ ಸೂಕ್ತವಲ್ಲ. ಜೀವದಯಾ, ಕಾರುಣ್ಯ ಬುದ್ಧನ ಮೊದಲು ಇರಲಿಲ್ಲವೇ ? ಅದ್ವೈತವಾದವನ್ನು ಉಪನಿಷತ್ತುಗಳು ಆಚಾರ್ಯ ಶಂಕರರ ಮೊದಲೇ ಪ್ರತಿಪಾದಿಸಿಲ್ಲವೇ-ಮಾಧ್ವರ ಮುಂಚೆಯೇ ಪೈಗಂಬರ ಮಹಮ್ಮದರು ದ್ವೈತ ಮತವನ್ನು ಮಂಡಿಸಿಲ್ಲವೇ ಹಾಗಾದರೆ ಬುದ್ಧ, ಶಂಕರ, ಮಾಧ್ವರು ಹೊಸ ಧರ್ಮವನ್ನು ಪ್ರತಿಪಾದಿಸಿಲ್ಲವೆನ್ನೋಣವೇ ? ಅವರು ಪ್ರತಿಪಾದಿಸಿಲ್ಲವಾದರೆ ಬಸವಣ್ಣನವರೂ ಪ್ರತಿಪಾದಿಸಿಲ್ಲ.

ಅಖಂಡವೂ, ಅನಂತವೂ, ಅವ್ಯಕ್ತಮಧುರವೂ ಆದ ಧರ್ಮ ಮಾನವ ಜೀವನದೊಂದಿಗೆ ಬೆಳೆದು ಬಂದಿರುತ್ತದೆ. ದೇಹವೇ ದೇವಾಲಯ, ಮನುಷ್ಯನ ಆತ್ಮವೇ ಆ ಪರಂಜ್ಯೋತಿ ಸ್ವರೂಪು. ಆದರೆ ಮಾನವ ತನ್ನ ಬಾಳಬೆಳಕು ಕಂದಿಕುಂದದಂತೆ ಹಲವು ಸಲ ಎಚ್ಚರವಾಗಿರುವುದಿಲ್ಲ. ಆತ್ಮ ಪ್ರಣತೆಯಲ್ಲಿ ಕಿಟ್ಟ ಕಿಲ್ಬಿಷಗಳು ಕೂಡುತ್ತ ಬರುತ್ತವೆ, ತೈಲ ಲಯವಾಗುತ್ತ ಹೋಗುತ್ತದೆ. ಬತ್ತಿಯನ್ನು ಮೇಲಿಂದ ಮೇಲೆ ಮಿಾಟುತ್ತಿರಬೇಕು. ಆ ಕೆಲಸವನ್ನು ಧರ್ಮಸಂಸ್ಥಾಪಕರು ಕಾಲಕಾಲಕ್ಕೆ ಮಾಡುತ್ತ ಹೋಗುತ್ತಾರೆ. ಈಶಾವಾಸ್ಯೋಪನಿಷತ್ತು ಹೇಳುವಂತೆ ಸತ್ಯದ ಮುಖ ಚಿನ್ನದ ತಟೆಗೆಯಿಂದ ಮುಚ್ಚಲ್ಪಟ್ಟಿರುತ್ತದೆ.* ಸತ್ಯಧರ್ಮಗಳಿಗೋಸುಗ ಆ ಮುಚ್ಚುಳವನ್ನು ತೆರೆಯಬೇಕಾಗುತ್ತದೆ. ಸ್ವಾಭಾವಿಕವಾಗಿ ಕಾಂತಿಯುತವಾದ ಕನ್ನಡಿ ಧೂಳಿನಿಂದ ಕಾಂತಿಹೀನವಾಗುತ್ತದೆ. ಅದನ್ನು ಶುದ್ಧಗೊಳಿಸಿದರೆ ಮೊದಲಿನ ಹಾಗೆ ಕಾಂತಿಬೀರುತ್ತದೆ. ಹಾಗೆಯೇ ಆತ್ಮನ ನಿಜಸ್ವರೂಪವನ್ನು ಕಂಡ ಆತ್ಮಗತ ಮೂರ್ತಿ ದುಃಖದಿಂದ ಪರಿತ್ಯಕ್ತನಾದ ಮೇಲೆ, ಉದ್ದಿಶ್ಯ ಸಾರ್ಥಕವಾಗಲು ವಿರಾಜಿಸುತ್ತಾನೆ. ಎಂದು ಶ್ವೇತಾಶ್ವತರ ಸಾರುತ್ತದೆ. ಪ್ರತಿಯೊಬ್ಬ ಮಹಾಪುರುಷನೂ ಕನ್ನಡಿಯ ನಿರ್ಮಾಲ್ಯವನ್ನು ಹೋಗಲಾಡಿಸುವ ಕೆಲಸಕ್ಕೆ ಕೈಹಾಕುತ್ತಾನೆ, ಸತ್ಯದ ನಿಜಸ್ವರೂಪವನ್ನು ಮರೆತಿದ್ದವರಿಗೆ ಅದು ಹೊಸದಾಗಿ ಕಾಣುತ್ತದೆ.

---

* ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ॥
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥—ಈಶಾವಾಸ್ಯ, ೧೫.

[ಮುಂದುವರಿಯುವುದು]

# ದೇಗುಲದ ಶ್ರೀ ನಿರ್ವಾಣ ಸ್ವಾಮಿಗಳು

—ಬಿ. ನಂಜುಂಡಪ್ಪ

**ದೇಗುಲ ಮಠದ ಪರಂಪರೆ :**

ದೇಗುಲ ಮಠವು ಬೆಂಗಳೂರು ಜಿಲ್ಲೆ ಕನಕಪುರದ ಬಳಿ ಕಾವೇರಿ ಉಪ ನದಿಯಾದ ಅರ್ಕಾವತಿಯ ಬಲ ದಡದಲ್ಲಿದ್ದು ಪವಿತ್ರ ಕ್ಷೇತ್ರವೆನಿಸಿದೆ. ಈ ಕ್ಷೇತ್ರವು ಹಲವು ಶತಮಾನಗಳಿಂದ ಅನೇಕಾನೇಕ ಮಹಾ ಶಿವಯೋಗಿಗಳ ನೆಲೆವೀಡಾಗಿತ್ತು. ಮನಸೆಳೆಯುವ ಪ್ರಕೃತಿ ಸೌಂದರ್ಯದ ನೆಲೆವೀಡಾಗಿರುವುದಲ್ಲದೆ ಶಿವಯೋಗಾನುಷ್ಠಾನಕ್ಕೆ ಉಚಿತವಾದ ಸನ್ನಿವೇಶವನ್ನೊಳಗೊಂಡಿದೆ. ಅಲ್ಲಿನ ಆದ್ಯ ಕರ್ತೃಗಳಾದ ಆದ್ಯ ನಿರ್ವಾಣ ಪ್ರಭುಗಳು ಕಲ್ಯಾಣದ ಶೂನ್ಯ ಸಿಂಹಾಸನಾಧೀಶ್ವರರಾದ ಪ್ರಭುದೇವರ ಪರಂಪರೆಯವರು. ಕಲ್ಯಾಣ ಕ್ರಾಂತಿಯ ನಂತರ ದಕ್ಷಿಣಕ್ಕೆ ಹೊರಹೊರಟ ವಿರಕ್ತ ಮೂರ್ತಿಗಳಲ್ಲಿ ಕೊಳ್ಳೇಗಾಲದ ಬಳಿಯಿರುವ ಪ್ರಭುದೇವರ ಬೆಟ್ಟದಲ್ಲಿ ಶಿವಯೋಗ ಸಮಾಧಿಯಲ್ಲಿದ್ದ ಪ್ರಭುದೇವರು, ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ನಿರ್ವಾಯ ಪ್ರಭುಗಳು (ಮಲೆಯ ಮಹದೇಶ್ವರರು), ನೂರೊಂದಯ್ಯನಬೆಟ್ಟ (ಕರ್ನಾಟಕದ ಆಗ್ನೇಯ ಅಂಚಿನಲ್ಲಿ) ದಲ್ಲಿ ನೆಲಸಿ ಸಮಾಧಿಸ್ಥರಾದ ನಿರಂಜನ ಗಣೇಶ್ವರರೇ ಮುಂತಾದ ಮಹಾ ಶಿವಯೋಗಿಗಳ ಪರಂಪರೆಯವರೇ ಕನಕಪುರ (ಆಗಿನ ಕಾಣಿಕಾರನಹಳ್ಳಿ) ಅರ್ಕಾವತೀ ಸುಕ್ಷೇತ್ರದಲ್ಲಿ ನೆಲಸಿದ ಆದ್ಯ ನಿರ್ವಾಣ ಪ್ರಭುಗಳೆಂಬ ಪ್ರತೀತಿಯಿದೆ. ಅವರೂ ಅವರ ಪರಂಪರೆಯಲ್ಲಿ ಬಂದ ಮಹಾಲಿಂಗ ಸ್ವಾಮಿಗಳು, ಹುಚ್ಚಪ್ಪಸ್ವಾಮಿಗಳು, ನಾಗಲಿಂಗಸ್ವಾಮಿಗಳು, ದೇವಲಿಂಗಸ್ವಾಮಿಗಳು ಮುಂತಾದವರು ಮಹಾಮಹಿಮರು, ಪವಾಡ ಪುರುಷರು.

ಆ ಮಹಾನುಭಾವರು ಶಿವಯೋಗ ನಿಷ್ಠರಾಗಿದ್ದುದಲ್ಲದೆ ಮಹಾ ಬೋಧಾ ಗುರುಗಳೂ ಆಗಿದ್ದರು. ಅವರ ದರ್ಶನಾಶೀರ್ವಾದವನ್ನು ಬಯಸಿ ನಾಡಿನ ನಾನಾ ಕಡೆಗಳಿಂದಲೂ ಭಕ್ತಸಮೂಹ ತಂಡೋಪತಂಡವಾಗಿ ಬರುತ್ತಿದ್ದುದರಿಂದ ಅವರ ನೆಲೆ 'ದೇಗುಲ' ಕ್ಷೇತ್ರವೆನಿಸಿತು. ಅಲ್ಲದೆ ಆ ಮಹಾ ವಿಭೂತಿಗಳ ಪ್ರಭಾವದಿಂದಾಗಿ ದೊಡ್ಡದೇವರಾಜ ಒಡೆಯರು ಮತ್ತು ಚಿಕ್ಕದೇವರಾಜ ಒಡೆಯರು ಮೈಸೂರು ರಾಜ್ಯವನ್ನಾಳುತ್ತಿದ್ದಾಗ ದೇಗುಲ ಮಠಕ್ಕೆ ಬಂದು ಅಂದಿನ ಶ್ರೀಗಳ ದರ್ಶನಾಶೀರ್ವಾದವನ್ನು ಪಡೆದು, ಮಠದ ಕಟ್ಟಡಗಳನ್ನು ಜೀರ್ಣೋದ್ಧಾರ ಮಾಡಿ, ನಿತ್ಯದಾಸೋಹ

ಪೂಜಾ ಕಾರ್ಯಗಳಿಗಾಗಿ ಸುತ್ತಣ ಜಮೀನುಗಳನ್ನು ದಾನವಾಗಿತ್ತಿರುವ ವಿಷಯ ಗಳನ್ನು ಮಠದ ಆವರಣದಲ್ಲಿರುವ ಶಿಲಾಶಾಸನಗಳು ತಿಳಿಸುತ್ತವೆ.

ಇಂತಹ ದಿವ್ಯ ಶಿವಯೋಗಿ ಪರಂಪರೆಯಲ್ಲಿ ಬಂದವರು ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳು. ಅವರು ಶಿವಯೋಗದ ಸಾಕ್ಷಾತ್ ಮೂರ್ತಸ್ವರೂಪರಾಗಿದ್ದರಲ್ಲದೆ ಪರಮ ದಾಸೋಹ ಮೂರ್ತಿಗಳೂ ಆಗಿದ್ದರು.

**ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರ ಪೂರ್ವಾಶ್ರಮ ವಿಚಾರ :**

ಬೆಂಗಳೂರು ಜಿಲ್ಲೆ ರಾಮನಗರಂ ಬಳಿಯಿರುವ ಐಜೂರು ಗ್ರಾಮದಲ್ಲಿದ್ದ ಗುರು ಲಿಂಗ ಜಂಗಮ ಸೇವಾನಿರತರಾದ ಒಂದು ವೀರಶೈವ ಮನೆತನದಲ್ಲಿ ಕ್ರಿ. ಶ. ೧೮೬೯ ರಲ್ಲಿ ಜನಿಸಿದವರು ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳು. ಸಾವಂದಪ್ಪ ಗೌರಮ್ಮಗಳು ಪಿತೃಗಳು. ಪೂರ್ವಾಶ್ರಮದ ಹೆಸರು ಬಸಪ್ಪದೇವರು.

**ಬಾಲ್ಯ-ಗುರು ಲಿಂಗ ಜಂಗಮ ಸೇವೆ :**

ಬಸಪ್ಪದೇವರಿಗೆ ಬಾಲ್ಯದಲ್ಲಿ ಅಲ್ಪ ಸ್ವಲ್ಪ ಪ್ರಾಥಮಿಕ ವಿದ್ಯಾಭ್ಯಾಸ ದೊರಕಿತು ಅಷ್ಟೇ. ಹಿರಿಯ ಸಹೋದರರು ವ್ಯವಸಾಯ ಕಾಯಕವನ್ನು ಕೈಕೊಂಡರು. ಬಸಪ್ಪದೇವರಿಗೆ ಆ ವೃತ್ತಿಯಲ್ಲಿ ಅವರಷ್ಟು ಆಸಕ್ತಿ ಇರಲಿಲ್ಲ. ಲಿಂಗಪೂಜೆಗೆ ಅಣಿ ಮಾಡುವುದು, ಲಿಂಗಪೂಜೆ ಮಾಡುವುದು, ಮನೆಗೆ ಬಂದ ಅತಿಥಿಗಳ ಮತ್ತು ಗುರುಜಂಗಮರ ಸೇವೆ, ಪೂಜೆಗಳಲ್ಲಿ ನೆರವೀಯುವುದು-ಅವುಗಳಲ್ಲಿ ಆಸಕ್ತಿ ಹೆಚ್ಚು.

ಆ ಸಮಯದಲ್ಲಿ ಶ್ರೀ ಫಲಾಹಾರ ಸ್ವಾಮಿಗಳೆಂಬ ವೀರವಿರಕ್ತರು ಅವರ ಗೃಹ ದಲ್ಲಿ ನೆಲಸಿದ್ದರು. ಅವರು ಶ್ರೀ ಅಡವೀಸ್ವಾಮಿಗಳವರ ಸಮಕಾಲೀನರಾಗಿ ಪರಸ್ಪರ ಪೂಜ್ಯಭಾವದಿಂದಿದ್ದರು. ಅವರ ನಂತರ ಶ್ರೀ ಸಿದ್ಧರಾಮ ಸ್ವಾಮಿಗಳೆಂಬ ಶಿವ ಯೋಗಿಗಳೊಬ್ಬರು ಅವರ ಗೃಹದಲ್ಲಿ ನೆಲಸಿದ್ದರು. ಆ ಶ್ರೀಗಳವರ ಸೇವಾ ಭಾಗ್ಯ ಬಸಪ್ಪ ದೇವರಿಗೆ ಲಭಿಸಿತು. ಶ್ರೀಗಳ ಸೇವೆಯೆಂದರೆ ಕಠಿಣ ವ್ರತಾಚರಣೆಯೇ ಆಗಿತ್ತು. ಅವರ ಮಡಿವಸ್ತ್ರಗಳನ್ನು ತೊಳೆಯುವುದು, ಪೂಜಾಗೃಹದ ಸ್ವಚ್ಛತೆ, ಹೂ-ಪತ್ರೆ ತರು ವುದು, ಸ್ನಾನ ಪೂಜೆಗಳಿಗೆ ಅಣಿಮಾಡುವುದು ಅವರ ಮುಖ್ಯ ಉದ್ಯೋಗ. ಬಸಪ್ಪ ದೇವರ ಈ ಗುರು ಲಿಂಗ ಜಂಗಮ ಸೇವಾಸಕ್ತಿ, ವಿನಯ, ಭಕ್ತಿ-ವೈರಾಗ್ಯ ಗುಣ ಗಳನ್ನು ಮೆಚ್ಚಿ ಶ್ರೀಗಳು ಸ್ವಲ್ಪ ಮಟ್ಟಿನ ಆಧ್ಯಾತ್ಮಿಕ ಶಿಕ್ಷಣವನ್ನೂ ಕೊಟ್ಟರು. ಬಾಲ್ಯದಲ್ಲಿ ದೊರೆತ ಧಾರ್ಮಿಕ ಶಿಕ್ಷಣದಿಂದ ಬಸಪ್ಪದೇವರ ಮನೋಭೂಮಿಕೆ ಸಹಜ ವೈರಾಗ್ಯ ಸಂಪತ್ತಿನ ಮಾರ್ಗ ಹಿಡಿಯಿತು.

ಎಳೆತನದಿಂದಲೂ ಬಸಪ್ಪದೇವರಿಗೆ ಪಶು-ಪ್ರಾಣಿಗಳಲ್ಲಿ ಕ್ರಿಮಿ-ಕೀಟಗಳಲ್ಲಿ ಅಪಾರ ದಯೆ; ನಡೆಯಲ್ಲಿ ಕಿಂಕುರ್ವಾಣತೆ, ಮೃದುವಚನ, ಮಿತಭಾಷೆ, ಮುಗ್ಧತೆ

ಅವರ ಸಹಜ ಗುಣವಾಗಿದ್ದವು. ಗೃಹಜೀವನದಲ್ಲಿ ಬೆಳೆದರೂ ಅವರ ಒಲವು ಪೂಜೆ ಸೇವಾವೃತ್ತಿಗಳ ಕಡೆಗಿತ್ತೇ ವಿನಾ, ತಂದೆ ತಾಯಿ ಬಂಧು ಬಳಗವೆಂಬ ವ್ಯಾಮೋಹ ದಿಂದ ಬರುಬರುತ್ತ ದೂರ ಸರಿಯತೊಡಗಿದನು. ಮಾನಸಿಕ ಒಲವು ಗುರು-ಲಿಂಗ-ಜಂಗಮ ಸೇವಾಕಾರ್ಯದಲ್ಲಿ ಮುಳುಗತೊಡಗಿತು.

**ನಿರಕ್ಕಾಶ್ರಮ ಸ್ವೀಕಾರ:**

ಕನಕಪುರ ದೇಗುಲಮಠದ ಪರಿಸರದಲ್ಲಿ ದೊಡ್ಡಮಠ, ಚಿಕ್ಕಮಠವೆಂಬ ಎರಡು ಮಠಗಳಿವೆ. ದೊಡ್ಡ ಮಠದಲ್ಲಿ ಶ್ರೀ ಚನ್ನಬಸವ ಸ್ವಾಮಿಗಳೂ ಚಿಕ್ಕ ಮಠದಲ್ಲಿ ಶ್ರೀ ಗುರುಳುಸಿದ್ಧ ಸ್ವಾಮಿಗಳೂ ಕರ್ತವ್ಯ ನಿರ್ವಹಿಸುತ್ತಿದ್ದರು. ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳು ವೃದ್ಧರಾಗಿದ್ದುದರಿಂದ ಉತ್ತರಾಧಿಕಾರಿಗಳನ್ನು ಆರಿಸುವ ಪ್ರಶ್ನೆ ಮೂಡಿತು. ಉಭಯ ಶ್ರೀಗಳವರ ಮತ್ತು ಭಕ್ತವರ್ಗದವರ ಇಚ್ಛೆ ಯಂತೆ ದೊಡ್ಡಮಠಕ್ಕೆ ಐಜೂರಿನ ಬಸಪ್ಪದೇವರನ್ನೂ ಚಿಕ್ಕಮಠಕ್ಕೆ ಆಲಳಾಳು ಗ್ರಾಮದ ಕಾಳಪ್ಪನವರನ್ನೂ ಉತ್ತರಾಧಿಕಾರಿ ವಟುಗಳನ್ನಾಗಿ ಆರಿಸಲಾಯಿತು. ಶ. ೧೯೦೫ನೇ ಶೋಭಕೃತು ಸಂವತ್ಸರದಲ್ಲಿ ಮರಳೆ ಗವೀಮಠದ ಚರಮೂರ್ತಿ ಗಳಾದ ಶ್ರೀ ಹುಚ್ಚಪ್ಪ ಸ್ವಾಮಿಗಳಿಂದ ಚರಪಟ್ಟಾಧಿಕಾರವು ಅನುಗ್ರಹಿಸಲ್ಪಟ್ಟಿತು. ಶ್ರೀ ಬಸಪ್ಪ ದೇವರಿಗೆ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳೆಂಬುದಾಗಿಯೂ ಶ್ರೀ ಕಾಳಪ್ಪನವರಿಗೆ ಇಮ್ಮಡಿ ಹುಚ್ಚಪ್ಪ ಸ್ವಾಮಿಗಳೆಂಬುದಾಗಿಯೂ ಅಭಿಧಾನವುಂಟಾ ಯಿತು. ಉಭಯ ನೂತನ ಶ್ರೀಗಳೂ ಆಯಾಯ ಮಠದಲ್ಲಿದ್ದು ಪರಸ್ಪರ ಹೊಂದಾ ಣಿಕೆಯಿಂದ ದೇಗುಲ ಮಠದ ಪುರೋವೃದ್ಧಿ ಕೀರ್ತಿಗೌರವಗಳನ್ನು ಕಾಪಾಡಿಕೊಂಡು ಬರಬೇಕೆಂದು ಸಮಾಜವು ಮನವಿಮಾಡಿತು. ಚರ ಪಟ್ಟಾಧಿಕಾರ ಮಹೋತ್ಸವವು ಅತ್ಯಂತ ವೈಭವದಿಂದ ಜರುಗಿತು.

**ಧಾರ್ಮಿಕ ಶಿಕ್ಷಣ:**

ಬಾಲ್ಯದಲ್ಲಿ ಮನೆಯ ಗುರುಗಳಾದ ಶ್ರೀ ಫಲಾಹಾರ ಸ್ವಾಮಿಗಳ ಮತ್ತು ಶ್ರೀ ಸ್ಥಿರಾಮ ಸ್ವಾಮಿಗಳ ಸೇವಾವಕಾಶ ಧಾರ್ಮಿಕ ಶಿಕ್ಷಣಗಳ ತಳಹದಿ ಶ್ರೀಗಳಿಗೆ ದೊರೆ ತದು ವಿದಿತವಷ್ಟೆ. ತಮ್ಮ ಹಿರಿಯ ಗುರುಗಳ ಸೇವಾನಿರತರಾಗಿದ್ದು, ಅವರ ಅನುಜ್ಞೆ ಯಂತೆ, ತಮ್ಮ ಆಶ್ರಮ ಸ್ವೀಕಾರವಾದ ತರುಣದಲ್ಲಿಯೇ ಬಿಡದಿಯ ಬಸಪ್ಪ ಶಾಸ್ತ್ರಿ ಗಳಿಂದ ಕೆಲವು ಕಾಲ ಮತಗ್ರಂಥಗಳ ಮತ್ತು ಮಂತ್ರಪಾಠಗಳ ಶಿಕ್ಷಣವನ್ನು ಪಡೆದರು. ಗುರುಶಿಷ್ಯ ಪಾಠಪರಿಚಯವೂ ಆಯಿತು. ಬೆಂಗಳೂರು ತಿಪ್ಪಸೆಟ್ಟಿ ಮಠದ ಶ್ರೀ ಪ್ರಶಾಂತ ಶಿವಯೋಗಿಗಳ ಆಶ್ರಯದಲ್ಲಿ ಸ್ವಲ್ಪಕಾಲವಿದ್ದು ಮತಧರ್ಮ ಶಿಕ್ಷಣ ಪಡೆ ದರು. ಚನ್ನಪಟ್ಟಣದ ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು ಶ್ರೀಗಳ ನಿಕಟ

ವರ್ತಿಗಳಾಗಿದ್ದುದರಿಂದ ಶಿವಾನುಭವ ಸಾಹಿತ್ಯದಲ್ಲಿ ಉಭಯ ಶ್ರೀಗಳೂ ವಿಶೇಷಾನ
ಭವವನ್ನು ಪಡೆದರು.

**ಶ್ರೀಗಳ ದೈನಂದಿನ ಆಚರಣೆ:—**

ಶ್ರೀ ನಿರ್ವಾಣ ಸ್ವಾಮಿಗಳು ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲ ಚರಣೆಯ ಮೂರ್ತಿಮಂತರಾಗಿದ್ದರು. ತಮ್ಮ ಪೂಜೆ ಅನುಷ್ಠಾನಗಳಲ್ಲಿ ಸ್ಥಿರ ಸಂಕ ವುಳ್ಳವರು. ಆದರೂ ತಮ್ಮ ಆಚರಣೆಗಳಿಗಾಗಿ ಇತರರ ಸಹಾಯವನ್ನು ಅವ ಅಪೇಕ್ಷಿಸುತ್ತಿರಲಿಲ್ಲ. ಇವರು ಅಧಿಕಾರಕ್ಕೆ ಬಂದ ತರುಣದಲ್ಲಿ ಮಠವು ತುಂಬಾ ಶಿಥಿ ಸ್ಥಿತಿಯಲ್ಲಿತ್ತು. ಸೇವಕರಿರಲಿಲ್ಲ, ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾ ಗಳೂ ಚಿಕ್ಕಮಠದ ಶ್ರೀ ಇಮ್ಮಡಿ ಹುಚ್ಚಪ್ಪ ಸ್ವಾಮಿಗಳೂ ಲಿಂಗೈಕ್ಯರಾಗಿದ್ದರು. ಕ ಹೊಡೆಯುವುದು, ನೀರು ಸೇದುವುದು, ಸಾರಣೆ ಮಾಡುವುದು, ಪೂಜೋಪಕರ ಗಳನ್ನು ಸಿದ್ಧಪಡಿಸುವುದು ಮುಂತಾದ ಎಲ್ಲಾ ಕೆಲಸಗಳನ್ನು ತಾವೇ ಮಾಡಿಕೊಳ ತ್ತಿದ್ದರು. ಕರ್ತೃ ಗದ್ದುಗೆಯ ಪೂಜೆ, ಲಿಂಗ ಪೂಜೆಗಳನ್ನು ಅರುಣೋದಯ ಮೊದಲೇ ಮಾಡಿ ಮುಗಿಸುತ್ತಿದ್ದರು. ತ್ರಿಕಾಲ ಲಿಂಗಪೂಜೆಯನ್ನು ಸುದೀರ್ಘವಾ ನಡೆಸುತ್ತಿದ್ದರು. ಪೂಜಾನಂತರ ಗ್ರಂಥಾವಲೋಕನ ಮಾಡುತ್ತಿದ್ದರು. ದರ್ಶನಾರ್ಥಿ ಗಳಾಗಿ ಬಂದ ಭಕ್ತ ಸಮೂಹದೊಡನೆ ಕುಶಲ ಸಂಭಾಷಣೆ ಮಾಡುವುದು, ಆಶೀವ ಚನ ನೀಡುವುದು, ಅವರೊಡನೆ ಬಂದ ಚಿಕ್ಕ ಮಕ್ಕಳಿಗೆ ಹಣ್ಣುಹಂಪಲು ಕೊಟ್ಟ ಪ್ರೀತಿಯಿಂದ ಸಂಭಾಷಿಸುವುದು, ಭಕ್ತಾದಿಗಳಿಗೆ ಪ್ರಸಾದ ನೀಡುವುದು–ಇವು ಅವ ಮಠದಲ್ಲಿದ್ದಾಗ ದಿನವೂ ನಡೆಸುತ್ತಿದ್ದ ಆಚರಣೆಗಳು. ಸ್ಥಳದ ಮತ್ತು ಪರಸ್ಥಳಗ ಭಕ್ತಾದಿಗಳಿಂದ ಬರುವ ಬಿನ್ನಹ–ಬಿಡುಗಡೆಗಳನ್ನು ತೀರಿಸುವುದು ಅವರ ನಿತ್ಯಕಾರ್ಯ

ಚಿಕ್ಕಮಠದ ಹಿರಿಯ ಗುರುಗಳಾದ ಶ್ರೀ ಮರುಳು ಸಿದ್ಧಸ್ವಾಮಿಗಳ ನೇತೃತ್ವದ ಬಹಳ ಶಿಥಿಲಾವಸ್ಥೆಯಲ್ಲಿದ್ದ ಗದ್ದುಗೆ ಮತ್ತು ಮಠದ ಕಟ್ಟಡಗಳ ಜೀರ್ಣೋದ್ಧಾ ಕಾರ್ಯಗಳು ಭಕ್ತಾದಿಗಳಿಂದ ನಡೆಸಲ್ಪಟ್ಟವು.

**ಶಿವ ಕ್ಷೇತ್ರಗಳ ಪ್ರವಾಸ:—**

ಶ್ರೀ ನಿರ್ವಾಣ ಸ್ವಾಮಿಗಳು ಕೆಲವು ಮಠಾಧೀಶ್ವರರೊಡನೆ ಉಳುವೆ ಮಹ ಮನೆ, ಗೋಕರ್ಣ ಕ್ಷೇತ್ರಗಳಲ್ಲಿ ಸಂಚರಿಸಿಬಂದರು. ಆ ಪ್ರವಾಸ ಕಾಲದಲ್ಲಿ ಉತ್ತ ಕರ್ನಾಟಕದ ಅನೇಕ ಶರಣರ ಗದ್ದುಗೆಗಳುಳ್ಳ ಶಿವಕ್ಷೇತ್ರಗಳನ್ನು ಸಂದರ್ಶಿಸಿದರು ಕ್ರಿ.ಶ. ೧೯೨೪ರ ಆಗಸ್ಟ್ ತಿಂಗಳಲ್ಲಿ ಶ್ರೀಗಳು ಮತ್ತೆ ಕೆಲವು ಶಿವ ಕ್ಷೇತ್ರಗಳನ ಸಂದರ್ಶಿಸಲು ಪ್ರವಾಸ ಹೊರಟರು. ಚನ್ನಪಟ್ಟಣದ ಶ್ರೀಗಳೂ ಅವರೊಡನೆ ಪ್ರವಾ ಭಾಗಿಗಳಾದರು. ಪ್ರವಾಸ ಕಾಲದಲ್ಲಿ ನಿರ್ವಾಣ ಸ್ವಾಮಿಗಳು ಚಿತ್ರದುರ್ಗ, ಹುಬ್ಬಳ

ಧಾರವಾಡ, ಬೆಳಗಾಂ, ಅಥಣಿ, ಷಹಪುರಗಳಲ್ಲಿನ ವೀರಶೈವ ಮಠಮಾನ್ಯಗಳನ್ನು ಸಂದರ್ಶಿಸಿ ಮುಂದೆ ಮುಂಬಯಿ, ಅಲಹಾಬಾದ್ (ಪ್ರಯಾಗ)ಗಳ ಮೂಲಕ ವಾರಣಾಸಿ(ಕಾಶಿ)ಗೆ ಪ್ರಯಾಣ ಮಾಡಿದರು. ಕಾಶೀಕ್ಷೇತ್ರದ ಸುರಾಭಾಂಡೇಶ್ವರದಲ್ಲಿ ಭಾರತೀಯ ದರ್ಶನ ಶಾಸ್ತ್ರಗಳ ಮಹಾ ಪಂಡಿತೋತ್ತಮರೂ ಮಹಾ ಶಿವಯೋಗಿಗಳೂ ಆದ ಶ್ರೀ ಗೌರೀಶಂಕರ ಸ್ವಾಮಿಗಳು (ಮೈಸೂರು ಅರಮನೆ ಪಂಚಗವೀ ಮಠಾಧೀಶರು) ಶ್ರೀಗಳನ್ನು ಅನನ್ಯ ಭಕ್ತಿ ಗೌರವಗಳಿಂದ ಆದರಿಸಿದರು. ಕಾಶೀಜಂಗಮವಾಡಿ ಮಠದ ಶ್ರೀ ವಿಶ್ವಾರಾಧ್ಯ ಪೀಠದ ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀಗಳವರನ್ನು ವಿಶೇಷವಾಗಿ ಆದರಿಸಿ ಅನೇಕ ದಿನಗಳವರೆಗೆ ತಮ್ಮ ಮಠದಲ್ಲೇ ಪೂಜಾತಿಥ್ಯವನ್ನು ನಡೆಸಿದರು. ಅಲ್ಲಿಂದ ಕಲ್ಕತ್ತೆಗೆ ಪ್ರಯಾಣಮಾಡಿ ಕೆಲವು ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಿ ಮದರಾಸಿನ ಮೂಲಕ ಬೆಂಗಳೂರಿಗೆ ಹಿಂತಿರುಗಿದರು. ಈ ಪ್ರವಾಸ ಮೂರು ತಿಂಗಳಕಾಲ ಹಿಡಿಯಿತು.

**ಪರಮ ದಾಸೋಹ ಮೂರ್ತಿ:**

ಶ್ರೀ ನಿರ್ವಾಣ ಶಿವಯೋಗಿಗಳ ದಾಸೋಹಶಕ್ತಿ ಅಸದೃಶವಾದುದು. ಮಠಕ್ಕೆ ಯಾವ ಸಮಯದಲ್ಲಿ ಯಾರೇ ಬರಲಿ, ಪ್ರಸನ್ನ ಚಿತ್ತರಾದ ಶ್ರೀಗಳ ಮುಖದಿಂದ "ಪ್ರಸಾದ ತೆಗೆದುಕೊಳ್ಳಿ, ನಡೆಯಿರಿ" ಎಂಬ ಅಪ್ಪಣೆ ಬರುತ್ತಿತ್ತು. ಪ್ರಸಾದ ನೀಡುವುದು ಅವರ ಪ್ರಮುಖ ಕಾಯಕವೆನ್ನುವಂತಿತ್ತು. ಹಲವು ವೇಳೆ ತಂಡೋಪತಂಡವಾಗಿ ಬರುತ್ತಿದ್ದ ಭಕ್ತ ಸಮೂಹಕ್ಕೆ ಪ್ರಸಾದ ನೀಡುವ ವ್ಯವಸ್ಥೆ ಬಗ್ಗೆ ಶ್ರೀಗಳು ವಿಶೇಷಾಸಕ್ತಿವಹಿಸುತ್ತಿದ್ದರು. ಭಿಕ್ಷುಕರು, ದೀನದರಿದ್ರರೂ ಕೂಡ ಅನೇಕವೇಳೆ ಶ್ರೀಗಳ ಹಸ್ತದಿಂದಲೇ ಪ್ರಸಾದ ಪಡೆಯುತ್ತಿದ್ದರು. ಒಮ್ಮೊಮ್ಮೆ ರಾತ್ರಿ ಅವೇಳೆಗಳಲ್ಲಿ ಪರಿಚಾರಕರು ನಿದ್ರಿಸುತ್ತಿರುವಾಗ ಅನಿರೀಕ್ಷಿತವಾಗಿ ಬಂದ ಆಗಂತುಕರಿಗೆ, ಸ್ವಲ್ಪವೂ ಗದ್ದಲವಿಲ್ಲದೆ ತಾವೇ ಎದ್ದು ಪ್ರಸಾದ ನೀಡುತ್ತಿದ್ದ ಪ್ರಸಂಗಗಳು ಅನೇಕವುಂಟು. ದಾಸೋಹ ಕಾರ್ಯದಲ್ಲಿ ಅವರು ಎಂದೂ ಬೇಸರ ಕಂಡವರಲ್ಲ.

**ಶ್ರೀಗಳ ವ್ಯಕ್ತಿತ್ವ, ಸಹಜ ಧರ್ಮ ಪಾಲನೆ:**

ಶ್ರೀ ನಿರ್ವಾಣ ಸ್ವಾಮಿಗಳು ವಿರಕ್ತಾಶ್ರಮ ಧರ್ಮವನ್ನು ನಿಷ್ಠೆಯಿಂದ ಆಚರಿಸಿದವರು, ಜ್ಞಾನಕ್ರಿಯಾ ಸಮನ್ವಿತರು, ಕಾಮ ಕ್ರೋಧಾದಿ ಅರಿಷಡ್ವರ್ಗದ ಉರವಣೆಗೆ ದೂರವಾಗಿದ್ದವರು. ಶಾಂತಮಲ್ಲ ಸ್ವಾಮಿಗಳ "ಅನುಭವ ಮುದ್ರೆ"ಯಲ್ಲಿ ಹೇಳಿರುವಂತೆ:-

"ಕಣ್ಣೊಳು ಕಾಮನ ಮನದೊಳು ಕೋಪನ
ಹಣ್ಣಿಹ ಮಾಯದ ಜಾಲವ

ಹೆಣ್ಣು ಹೊನ್ನು ಮಣ್ಣುಯೆಂಬ ಪಾಶಂಗಳ
ಹಣ್ಣದಿರಲು ನಿರ್ವಾಣವು"

"ಏನೊಂದು ವಸ್ತುವನಾರನು ಬೇಡದೆ
ತಾನಾಗಿ ಬಂದುದ ಕೈಕೊಂಡು
ಜ್ಞಾನಿಗಳೊಡನಾಡಿ ಕರತಳದೊಳು ಲಿಂಗ
ಧ್ಯಾನವುಳ್ಳದು ನಿರ್ವಾಣವು"

ನಿರ್ವಾಣವೆಂಬ ಸಾರ್ಥಕ ನಾಮವುಳ್ಳವರು ಅವರು. ಬಯಸಿ ಬಂದದು ಅಂಗಭೋಗ, ಬಯಸದೆ ಬಂದುದು ಲಿಂಗಭೋಗ ಎಂಬ ಶರಣರ ಅನುಭವ ವಾಣಿಯನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದವರು ಅವರು ಭಕ್ತರ ಸ್ಥಿತಿಗತಿಗಳನ್ನರಿತು, ಅವರವರಿಗೆ ತಕ್ಕಂತೆ ಅವರ ಭಕ್ತಿಯನ್ನು ಸ್ವೀಕರಿಸುತ್ತಿದ್ದರು. ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರರ

ಲಿಂಗ ಜಂಗಮ ಭಕ್ತಿಯ ಮಾಡಿಸಿ ಕೊಂಬಲ್ಲಿ ವಿವರವುಂಟು :
ಲೌಕಿಕ, ಅಲೌಕಿಕ, ಸಹಜವೆಂಬ ಮಾಟತ್ರಯುವ ನರಿದು,
ಲೌಕಿಕ ಭಕ್ತರಲ್ಲಿ ಅವರಿಚ್ಛೆಯಲ್ಲಿರ್ದು, ಭಕ್ತಿಯ ಮಾಡಿಸಿಕೊಂಬುದು.
ಅಲೌಕಿಕ ಭಕ್ತರಿಗೆ ತಾಕರ್ತನಾಗಿ ಅವರು ಭೃತ್ಯರಾಗಿ ಭಕ್ತಿಯ ಮಾಡಿಸಿ ಕೊಂಬುದು.
ಸಹಜ ಭಕ್ತರಲ್ಲಿ ಕರ್ತೃತ್ವ ಭೃತ್ಯತ್ವವಿಲ್ಲದೆ ಭಕ್ತಿಯ ಮಾಡಿಸಿ ಕೊಂಬುದು.
ಇಂತಿದು ಲಿಂಗ ಜಂಗಮದ ಜಾಣ್ಮೆ ಕಾಣಿರೋ.
ಕೂಡಲಚನ್ನಸಂಗಮದೇವಾ"

ಎಂಬ ವಚನಾನುಭವದ ನಡೆಯುಳ್ಳವರು-ಅವರು ಸಮಾಧಾನ ಚಿತ್ತರು, ಸರ್ವ ಸಮತಾಭಾವವುಳ್ಳವರು; ತನ್ನವರು ಅನ್ಯರೆಂಬ ಭಿನ್ನ ಭಾವ ವಿಲ್ಲದವರು. ಬಡವರು ಬಲ್ಲಿದರೆಂಬ ತಾರತಮ್ಯವನ್ನರಿಯದವರು. ದೀನ ದರಿದ್ರರಲ್ಲಿ ಕನಿಕರವುಳ್ಳವರು. ಪ್ರಾಣಿಮಾತ್ರದಲ್ಲಿ ಅಪಾರ ಕರುಣೆಯುಳ್ಳವರು; ಸದಾ ಸಂತೋಷ ಚಿತ್ತರು.

ಸಾಧು ಸತ್ಪುರುಷರಲ್ಲಿ ಅಪಾರ ಪ್ರೇಮವುಳ್ಳವರು. ಹರಗುರು ಚರಮೂರ್ತಿಗಳಲ್ಲಿ ಭಕ್ತಿ ಭಾವವುಳ್ಳವರು. ಲಿಂಗಾನುಭಾವಿಗಳ ಸಂಗಸುಖವನ್ನು ಸದಾ ಹಾರೈಸುವವರು ಅವರು.

ಕ್ರಿ. ಶ. ೧೯೫೦ ರಲ್ಲಿ ಮೈಸೂರು ಮಹಾರಾಜರಾದ ಶ್ರೀಜಯಚಾಮರಾಜ ಒಡೆಯರು ದೇಗುಲದ ಮಠಕ್ಕೆ ಆಗಮಿಸಿ, ಶ್ರೀಗಳ ದರ್ಶನಾಶೀರ್ವಾದವನ್ನು ಪಡೆದರಲ್ಲದೆ ಶ್ರೀಗಳ ವ್ಯಕ್ತಿತ್ವವನ್ನು ಶ್ಲಾಘಿಸಿದರು. ಆಗಾಗ್ಗೆ ರಾಜ್ಯದ ಸಚಿವರೂ ಉನ್ನತಾಧಿಕಾರಿಗಳೂ, ಪ್ರಮುಖರೂ ಶ್ರೀಗಳ ದರ್ಶನಭಾಗಿಗಳಾಗಿದ್ದರು. ಭಾರತದ ಶ್ರೇಷ್ಠ

ದಾರ್ಶನಿಕರೂ, ಪಂಡಿತೋತ್ತಮರೂ, ಪರಮ ವೈರಾಗ್ಯ ಮೂರ್ತಿಗಳೂ, ಶಿವಯೋಗಿಗಳೂ ಆಗಿದ್ದ ಅರಮನೆ ಪಂಚಗವೀಮಠಾಧ್ಯಕ್ಷರಾದ ಲಿಂಗೈಕ್ಯ ಶ್ರೀ ಗೌರೀಶಂಕರ ಸ್ವಾಮಿಗಳು ಶ್ರೀ ನಿರ್ವಾಣಸ್ವಾಮಿಗಳಲ್ಲಿ ಅನನ್ಯ ಭಕ್ತಿ ಭಾವವುಳ್ಳವರಾಗಿದ್ದರು.

ಶ್ರೀ ನಿರ್ವಾಣ ಸ್ವಾಮಿಗಳು ಶಿವಭಕ್ತರ ಕಥೆಗಳನ್ನೂ ಶಿವಲೀಲಾ ಪ್ರಸಂಗಗಳನ್ನು ಕೇಳುವುದರಲ್ಲಿ ಶಿವಕೀರ್ತನೆ ಭಜನೆಗಳಲ್ಲಿ ಭಾಗವಹಿಸುವುದರಲ್ಲಿ ಆಸಕ್ತರಾಗಿದ್ದರು. ಮಹಾ ಶರಣರಾದ ಸಕಲೇಶ ಮಾದರಸರೆಂದಂತೆ "ದೊರೆ ಕೊಂಡಂತೆ ಮನದಣಿದಿಪ್ಪವರು'' "ದುಃಖಕ್ಕೆ ದೂರಾಗಿಪ್ಪವರು", "ಒಳಗನರಿದು ಹೊರಗೆ ಮರೆದವರು'', ''ಸದಾನಂದದಲ್ಲಿ ಸುಖಿಯಾಗಿಪ್ಪವರು" ಆಗಿದ್ದರು. "ತಾನು ತನ್ನಂತೆ" ಇರುವರಾದರೂ, ಲೋಕ, ಲೌಕಿಕರೊಡನೆ ''ಬೆಂದ ನುಲಿಯಂತೆ'' ಇರುತ್ತಿದ್ದರು. ಸ್ವಯ, ಚರ ಮತ್ತು ಪರ ಜಂಗಮ ಮೂರ್ತಿಗಳಾಗಿ ವರ್ತಿಸಿದವರು- ಅವರು.

ಪರಿಶುದ್ಧಾಂತಃಕರಣ, ಸರಳ ಸಹಜ ಮುಗ್ಧಭಾವ, ಶಿವಯೋಗ ತೇಜಸ್ಸುಳ್ಳವರಾದುದರಿಂದ ದರ್ಶನ ಮಾತ್ರದಿಂದ ದರ್ಶನಾರ್ಥಿಗಳು ಪ್ರಭಾವಿತರಾಗುತ್ತಿದ್ದರು.

ಲೌಕಿಕ ವ್ಯವಹಾರಗಳ ತೊಡಕುಗಳನ್ನು ಬಗೆಹರಿಸಿಕೊಳ್ಳಲು ಗುರುವಿನ ಆಶೀರ್ವಾದವನ್ನು ಬಯಸಿ ಬರುವ ಭಕ್ತಾದಿಗಳ ಯೋಗಕ್ಷೇಮವನ್ನು ವಿಚಾರಿಸಿ ಶ್ರೀಗಳು ಅವರ ಕಷ್ಟಸಂಕಷ್ಟಗಳಿಗೆ ಪರಿಹಾರವನ್ನು ಸೂಚಿಸುತ್ತಿದ್ದರು. ಮನೆ ಕಟ್ಟುವುದು, ಗೃಹಪ್ರವೇಶ, ಮದುವೆ-ಮುಂಜಿ, ಲಗ್ನ ನಿಶ್ಚಯ ಮುಂತಾದ ಶುಭ ಕಾರ್ಯಗಳಿಗೆ, ಕಷ್ಟಗಳ ಭಯ ನಿವಾರಣೆಗೆ ಶ್ರೀಗಳ ಶ್ರೀಹಸ್ತದಿಂದ ಯಂತ್ರಧಾರಣೆ ಪ್ರಸಾದ ವಾಣಿ ಬಯಸಿ ಭಕ್ತಶ್ರೇಣಿ ದಿನವೂ ಬರುತ್ತಲೇ ಇತ್ತು.

**ಕಾಯಕ ನಿರತರು :**

ಶ್ರೀಗಳು ತಮ್ಮ ಸಹಜಕಾಯಕವಾದ ಪೂಜಾನುಷ್ಠಾನದೊಂದಿಗೆ ಭಕ್ತರ ಬಿನ್ನಹ ನಡುಗಡೆ ಕಾರ್ಯವನ್ನು ಶ್ರದ್ಧಾಸಕ್ತಿಯಿಂದ ನೆರವೇರಿಸುತ್ತಿದ್ದರು. ಅನೇಕಾನೇಕ ದೂರದ ಗ್ರಾಮಗಳವರು ಆಗಾಗ್ಗೆ ಬಿನ್ನಹ ಮಾಡಿ ಶ್ರೀಗಳನ್ನು ತಮ್ಮ ಗ್ರಾಮಗಳಿಗೆ ವಿಜಯ ಮಾಡಿಸಿ, ಪೂಜೋಪಚಾರ, ಹೂವಿನ ಪಲ್ಲಕ್ಕಿ ಉತ್ಸವಗಳನ್ನು ವಿಜೃಂಭಣೆಯಿಂದ ನಡೆಸುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಮುಪ್ಪಿನ ದೇಹ ವಿಕಾರವಾಗಲೀ ಆಯಾಸವಾಗಲೀ ಅವರಲ್ಲಿ ಗೋಚರ ವಾಗುತ್ತಿರಲಿಲ್ಲ, ಸದಾ ಪ್ರಸನ್ನಚಿತ್ತರಾಗಿರುತ್ತಿದ್ದರು.

**ಗ್ರಂಥಾವಲೋಕನಾಕಾಂಕ್ಷೆ :**

ದಿನಂಪ್ರತಿ ಪೂಜಾನಂತರದಲ್ಲಿ, ಬಿಡುವಿನ ಸಮಯಗಳಲ್ಲಿ, ಶ್ರೀ ನಿರ್ವಾಣ

ಸ್ವಾಮಿಗಳು ಧಾರ್ಮಿಕ ಗ್ರಂಥಗಳನ್ನು ಅವಲೋಕಿಸುತ್ತಿದ್ದರು. ಶ್ರೀ ಚನ್ನಬಸವೇಶ್ವರರ ಶಿವಾನುಭವ ಶಾಸ್ತ್ರ (ಕರಣಹಸಿಗೆ, ಮಿಶ್ರಾರ್ಪಣ) ವನ್ನೂ ಶರಣರ ಆಚರಣೆಯ ವಚನಗಳನ್ನೂ, ಶಿವಪುರಾಣಗಳನ್ನೂ ನೋಡುತ್ತಿದ್ದರು. ಮಗ್ಗೆಯ ಮಾಯಿದೇವ ಪ್ರಭುಗಳ "ಶತಕತ್ರಯ", ಶಾಂತಮಲ್ಲ ಸ್ವಾಮಿಗಳ "ಅನುಭವ ಮುದ್ರೆ", ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳು, ಮುಖ್ಯವಾಗಿ "ಕೈವಲ್ಯ ಪದ್ಧತಿ" ಸರ್ಪಭೂಷಣ ಶಿವಯೋಗಿಗಳ "ಕೈವಲ್ಯ ಕಲ್ಪವಲ್ಲರಿ" ಹಾಡುಗಬ್ಬಗಳ ತಾತ್ವಿಕಾರ್ಥಗಳನ್ನು ವಿವೇಚಿಸುವುದರಲ್ಲಿ ಶ್ರೀಗಳು ಹೆಚ್ಚು ಆಸಕ್ತರಾಗಿರುತ್ತಿದ್ದರು.

## ಲಿಂಗೈಕ್ಯರಾಗಿ ಬೆಳಗಿದ್ದಾರೆ :

ಇಂತಹ ಶರಣರಾಚರಣೆಯಿಂದ ಮಹೋನ್ನತ ವ್ಯಕ್ತಿತ್ವವನ್ನು ಹೊಂದಿದ ದೇಗುಲದ ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರು ಲೋಕಪೂಜ್ಯರಾಗಿ ಬೆಳಗಿ ದಿನಾಂಕ ೩೦-೧-೧೯೭೨ ಭಾನುವಾರ ಸಂಜೆ ೬-೪೫ ಘಂಟೆ ಸಮಯದಲ್ಲಿ ಮಹಾಲಿಂಗದೊಳಗಾದರು. ಆ ಬೆಳಗು ಮಹಾ ಬೆಳಗಿನೊಳಡಗಿತು. ಅವರ ಅವಸಾನ ಸಮಯದಲ್ಲಿ ಅವರ ಕರ ಸಂಜಾತರಾದ ನಿ. ಪ್ರ. ಸ್ವ. ಚರಮೂರ್ತಿ ಶ್ರೀ ಮಹಾಲಿಂಗ ಸ್ವಾಮಿಗಳೂ, ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ಪರಮಪೂಜ್ಯ ನಿ. ಪ್ರ. ಸ್ವ. ಶ್ರೀ ಶಿವಕುಮಾರ ಸ್ವಾಮಿಗಳೂ ಮರಳೆ ಗವೀ ಮಠಾಧೀಶರಾದ ನಿ. ಪ್ರ. ಸ್ವ. ಶ್ರೀ ಚರಮೂರ್ತಿ ಶಿವರುದ್ರಸ್ವಾಮಿಗಳೂ, ಕಂಚುಗಲ್ ಬಂಡೇಮಠದ ನಿ. ಪ್ರ. ಸ್ವ. ಚರ ಮೂರ್ತಿ ಶ್ರೀ ಶಿವರುದ್ರಸ್ವಾಮಿಗಳೂ ನೂರಾರು ಮಂದಿ ಹರಗುರು ಚರಮೂರ್ತಿಗಳೂ ಅಂತ್ಯದರ್ಶನ ಪಡೆದರು. ಹತ್ತಾರು ಸಾವಿರಮಂದಿ ಭಕ್ತರೂ, ಪ್ರಮುಖರೂ ದರ್ಶನ ಭಾಗಿಗಳಾದರು. ಅವರನ್ನರಿತ ಭಕ್ತಕೋಟಿ ಕಣ್ಣೀರು ಸುರಿಸಿತು. ಶ್ರೀ ನಿರ್ವಾಣ ಶಿವಯೋಗಿಗಳ ದಿವ್ಯ ತೇಜೋಮೂರ್ತಿ ಲಿಂಗಾಂಗ ಸಂಗ ಸುಖಿಗಳ ಹೃದಯ ಮಂದಿರದಲ್ಲಿ ಮಹಾಲಿಂಗವಾಗಿ ಬೆಳಗುತ್ತಿರುವುದು.

## ಇಂದಿನ ಚರಮೂರ್ತಿ ಮಹಾಲಿಂಗಸ್ವಾಮಿಗಳವರ ಉಜ್ವಲ ಕಾರ್ಯ :

ಲಿಂಗೈಕ್ಯ ಶ್ರೀ ನಿರ್ವಾಣ ಸ್ವಾಮಿಗಳವರಲ್ಲಿದ್ದ ಶಿವಯೋಗ ಪ್ರಭೆ, ಲಿಂಗ ಪೂಜಾಸಕ್ತಿ, ದಾಸೋಹ ಭಾವ, ವೀರವೈರಾಗ್ಯ ಮತ್ತು ದಯಾರ್ದ್ರ ಹೃದಯತೆ ತಮ್ಮದೇ ಆದ ಕಾರ್ಯ ದಕ್ಷತೆಗಳು ಅವರ ನೆಚ್ಚಿನ ಕರಸಂಜಾತರಾದ ಚರಮೂರ್ತಿ ಶ್ರೀ ಮಹಾಲಿಂಗ ಸ್ವಾಮಿಗಳವರಲ್ಲಿ ಬೆಳೆದು ಫಲಿಸಿವೆ. ಚರಮೂರ್ತಿ ಶ್ರೀ ಮಹಾ ಲಿಂಗ ಸ್ವಾಮಿಗಳು ತಮ್ಮ ಗುರುಪರಂಪರೆಗೆ ಸಹಜವಾದ ಆಧ್ಯಾತ್ಮಿಕ ದಿವ್ಯ ಶಿವ ತೇಜಸ್ಸನ್ನು ಪಡೆದವರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಲಿಂಗೈಕ್ಯ ಶ್ರೀಗಳೂ ಮಹಾ ತಪಸ್ವಿಗಳೂ ಆಗಿದ್ದ ಶ್ರೀ ಉದ್ದಾನ ಶಿವಯೋಗಿಗಳವರಲ್ಲಿ ಎಳೆತನದಿಂದಲೂ ಸೇವೆ ಸಲ್ಲಿಸಿ ಅವರ ಪೂರ್ಣಾಶೀರ್ವಾದವನ್ನು ಪಡೆದರು. ಅವರು ಚರ ಪಟ್ಟಾಧಿಕಾರವನ್ನು

ಸಿದ್ಧಗಂಗಾ

ಸ್ವೀಕರಿಸಿದ ಕಳೆದ ೩೬ ವರ್ಷಗಳಿಂದಲೂ ತಮ್ಮ ಗುರುವರ್ಯರ ಸೇವೆಯನ್ನು ಅವ್ಯಾಹತವಾಗಿ ನಡೆಸಿದ್ದಾರೆ. ಶ್ರೀ ಗುರುಕೃಪಾಶೀರ್ವಾದದಿಂದಲೂ, ಶಿವಯೋಗನಿಷ್ಠೆಯಿಂದಲೂ ಉಂಟಾದ ಕಾರ್ಯ ತತ್ಪರತೆ ಪ್ರಭಾವಗಳಿಂದ ಶ್ರೀ ಮಠದ ಕಾರ್ಯ ವ್ಯಾಪ್ತಿ ವಿಪುಲವಾಗಿ ಬೆಳೆದು ಬಂದಿದೆ. ಗುರುಗಳ ಆಜ್ಞಾನುಸಾರವಾಗಿ ಸ್ಥಾಪಿಸಿದ ಶ್ರೀ ನಿರ್ವಾಣಸ್ವಾಮಿ ಕೃಪಾ ವಿದ್ಯಾಪೀಠದ ಆಶ್ರಯದಲ್ಲಿ ಶ್ರೀ ಮಠದಲ್ಲಿ ಒಂದು ಪ್ರೌಢಶಾಲೆ, ಸಂಸ್ಕೃತ ಮಹಾ ಪಾಠಶಾಲೆ, ವೇದಪಾಠಶಾಲೆ, ಹಿರಿಯ ಪ್ರಾಥಮಿಕ ಶಾಲೆಗಳು ನಡೆಸಲ್ಪಡುತ್ತಿವೆ. ಈ ಸಂಸ್ಥೆಯ ಆಶ್ರಯದಲ್ಲಿ ಹಲಸಹಳ್ಳಿ ಮತ್ತು ವೀರೇಗೌಡನದೊಡ್ಡಿಗಳಲ್ಲಿ ಪ್ರೌಢಶಾಲೆಗಳು ಸ್ಥಾಪಿತವಾಗಿ ಉತ್ತಮ ಶಿಕ್ಷಣವೀಯುತ್ತಿವೆ. ಪ್ರಸ್ತುತ ಶ್ರೀ ಮಠದಲ್ಲಿ ಒಂದು ಸಹಸ್ರಕ್ಕೂ ಮೇಲ್ಪಟ್ಟು ಈಗ ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೆ ಪ್ರಸಾದ ಮತ್ತು ವಸತಿ ಸೌಕರ್ಯವನ್ನು ಒದಗಿಸಲಾಗಿದೆ. ಭವ್ಯವಾದ ಸುಭದ್ರ ಕಟ್ಟಡಗಳು ನಿರ್ಮಿಸಲ್ಪಟ್ಟಿವೆ. ದಿನಂಪ್ರತಿ ನೂರಾರು ಮಂದಿ ಪ್ರವಾಸಿಗರಿಗೂ ಬಡಬಗ್ಗರಿಗೂ ಪ್ರಸಾದ ವಿನಿಯೋಗವಾಗುತ್ತಿದೆ. ಸ್ಥಳೀಯ ಜಾತ್ರೆ ಮತ್ತು ವಿಶೇಷ ಕಾರ್ಯಗಳಲ್ಲಿ ಹತ್ತಾರು ಸಾವಿರ ಮಂದಿಗೆ ಪ್ರಸಾದ ವಿನಿಯೋಗವಾಗುತ್ತಿರುವುದು. ಆಗಾಗ್ಗೆ ಧಾರ್ಮಿಕ ಸಭೆಗಳೂ ಉಪನ್ಯಾಸಗಳೂ ಶಿವಾನುಭವ ಗೋಷ್ಠಿಗಳೂ ನಡೆಸಲ್ಪಡುತ್ತಿವೆ.

---

ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಮಹಾಲಿಂಗ ಸ್ವಾಮಿಗಳವರ ಕರಕಮಲ ಸಂಜಾತರಾಗಿ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಮುಮ್ಮಡಿ ನಿರ್ವಾಣ ಸ್ವಾಮಿಗಳವರು ಇಂದು ಶ್ರೀ ಮಠದ ಉತ್ತರಾಧಿಕಾರಿಗಳಾಗಿ ಮುಂದುವರಿದಿದ್ದಾರೆ. ಶಾಂತಸ್ವಭಾವದ ಸೌಜನ್ಯತೆಗೆ ಮತ್ತೊಂದು ಹೆಸರಾದ ಶ್ರೀ ಶ್ರೀಗಳವರು ದೇಗುಲ ಮಠದ ಧ್ಯೇಯ ಧೋರಣೆಗಳನ್ನೂ, ದಾಸೋಹ ಕಾರ್ಯವನ್ನೂ ತುಂಬು ಪ್ರೀತಿಯಿಂದ ನಡೆಸಿಕೊಂಡು ಬರುತ್ತಿದ್ದಾರೆ. ವಚನ ಸಾಹಿತ್ಯದಲ್ಲಿ ಅಪಾರ ಪ್ರೇಮ, ಶರಣರ ವೈಚಾರಿಕತೆಯ ಬಗ್ಗೆ ಅಭಿಮಾನ, ಸಕಲ ಜೀವರಿಗೆ ಲೇಸನೇ ಬಯಸುವ ಹೃದಯ ವೈಶಾಲ್ಯತೆ ಶ್ರೀ ಶ್ರೀಗಳವರ ಜನಾನುರಾಗಕ್ಕೆ ನಾಂದಿಯಾಗುತ್ತಿರುವುದು ಸಂತೋಷದಾಯಕವಾದ ವಿಚಾರ. ಶ್ರೀ ಮಠ ತನ್ನ ಸೇವಾ ಜೀವನದ ಅಭಿವೃದ್ಧಿಯನ್ನು ಶ್ರೀ ಶ್ರೀಗಳವರ ಮಾರ್ಗದರ್ಶನದಲ್ಲಿ ಸಾಧಿಸುವಂತಾಗಲೀ ಎಂದು ಪ್ರಾರ್ಥಿಸುತ್ತೇವೆ.

( —ಸಂಪಾದಕರು )

---

# ವಸಿಷ್ಠ

—ಪ. ರಾಮಕೃಷ್ಣಶಾಸ್ತ್ರಿ

ಏಳು ಮಂದಿ ಗೋತ್ರಪ್ರವರ್ತಕರಲ್ಲಿ ಬ್ರಹ್ಮರ್ಷಿ ವಸಿಷ್ಠನೂ ಒಬ್ಬ. ಸ್ವಾಯಂಭೂ ಮನ್ವಂತರದಲ್ಲಿ ಬ್ರಹ್ಮದೇವನ ಪ್ರಾಣವಾಯುವಿನಿಂದ ಬ್ರಹ್ಮನ ಮಾನಸಪುತ್ರನಾಗಿ ಆತ ಜನಿಸಿದ ಎನ್ನುವುದು ಒಂದು ಕತೆ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅದಿತಿಯ ಮಕ್ಕಳಾದ ಮಿತ್ರನೂ ತರುಣನೂ ಸುಂದರಿಯಾದ ಊರ್ವಶಿಯನ್ನು ಏಕಕಾಲಕ್ಕೆ ನೋಡಿ ಮೋಹಪರವಶನಾಗಿ ತಮ್ಮ ತೇಜಸ್ಸನ್ನು ಕೆಳಗೆ ಬಿಟ್ಟರು. ಈ ಎರಡು ತೇಜಸ್ಸುಗಳ ಸಮ್ಮಿಲನದಿಂದ ವಸಿಷ್ಠನೂ ಅಗಸ್ತ್ಯನು ಜನಿಸಿದರೆಂದೂ ಭಾಗವತದಲ್ಲಿದೆ. ಬ್ರಹ್ಮನ ಯಜ್ಞಕುಂಡದಿಂದ ವಸಿಷ್ಠ ಪುನರ್ಜನ್ಮವನ್ನು ತಳೆದು ಶ್ರೀರಾಮನಿಗೂ ಅವನ ಸೂರ್ಯವಂಶದವರಿಗೂ ಪುರೋಹಿತನಾಗಿದ್ದ ವೃತ್ತಾಂತ ಮಹಾಭಾರತದಲ್ಲಿದೆ.

ಅಪರೋಕ್ಷ ಜ್ಞಾನಿಯೂ ಶಾಂತ ಸ್ವಭಾವಿಯೂ ಆದ ವಸಿಷ್ಠನು ವೇದವೇದಾಂಗ ಪಾರಂಗತ. ಸತ್ಯವಂತ. ಪರೋಪಕಾರಿ. ಹರಿವಂಶವು ವಸಿಷ್ಠನೆಂದರೆ ಬ್ರಹ್ಮನೇ ಹೊರತು ಇನ್ನೊಬ್ಬನಲ್ಲ ಎನ್ನುತ್ತದೆ. ಅವನು ತನ್ನ ಕಲ್ಪನೆಯಿಂದ ಲಾವಣ್ಯವತಿಯಾದ ಜಗತ್ತಿನ ಮೊದಲ ನಾರಿಯನ್ನು ಸೃಷ್ಟಿಸಿ ಶತರೂಪೆ ಎಂದು ಹೆಸರಿಟ್ಟ. ಆಕೆ ಹತ್ತು ಸಾವಿರ ವರ್ಷ ತಪಸ್ಸನ್ನಾಚರಿಸಿದ ಮೇಲೆ ವಸಿಷ್ಠ ಅವಳನ್ನು ಮದುವೆಯಾಗಿ ವೀರ ಎಂಬ ಮಗನನ್ನು ಪಡೆದ. ಕರ್ದಮ ಮುನಿಯ ಮಗಳು ಕಾಮ್ಯಾ ಈ ವೀರನ ಹೆಂಡತಿ. ಧ್ರುವನ ತಂದೆ ಉತ್ತಾನಪಾದರಾಯ ಕಾಮ್ಯಾ-ವೀರ ದಂಪತಿಗಳ ಮಗ ಎಂಬ ಆಖ್ಯಾಯಿಕೆಯಿದೆ.

ಸ್ವಯಂಭೂ ಮನುವಿಗೆ ಶತರೂಪೆ ಎಂಬವಳಲ್ಲಿ ಜನಿಸಿದ ನಾಲ್ವರು ಕನ್ಯೆಯರಲ್ಲಿ ದೇವಹೂತಿ ಎಂಬಾಕೆ ಕರ್ದಮ ಋಷಿಯ ಹೆಂಡತಿ. ಅವಳ ಮಗಳು ಅರುಂಧತಿ ಎನ್ನುತ್ತದೆ ಭಾಗವತ. ಆದರೆ ವಾಯು ಮತ್ತು ಕೂರ್ಮ ಪುರಾಣಗಳ ಪ್ರಕಾರ ಅವಳು ಕಶ್ಯಪರ ಮಗಳು. ಅಸಾಧಾರಣ ಪಂಡಿತೆ. ಅಪೂರ್ವ ತಪಸ್ಸಿದ್ಧಿ ಪಡೆದಾಕೆ. ಬ್ರಹ್ಮಾಂಡದ ಪ್ರತಿವ್ರತಾ ಶಿರೋಮಣಿಗಳಲ್ಲಿ ಮೊದಲಿಗಳು. ಅವಳನ್ನು ಅವಳ ಅಣ್ಣ ನಾರದನು ವಸಿಷ್ಠನಿಗೆ ಮದುವೆ ಮಾಡಿ ಕೊಡುವ ಕತೆಯಿದೆ. ಪರಮ ಭಕ್ತಿಯಿಂದ

ಆಕೆ ಬಾಲ್ಯದಲ್ಲಿ ಗೌರಿದೇವಿಯನ್ನು ಪೂಜಿಸುತ್ತಿದ್ದ ಕಾರಣ ಸಪ್ತರ್ಷಿ ನಕ್ಷತ್ರ ಮಂಡಲ ದಲ್ಲಿ ಅವಳಿಗೂ ಸ್ಥಾನ ಸಿಕ್ಕಿತು. ವಿವಾಹದಂದು ವಧೂವರರಿಗೆ ಅರುಂಧತಿ ನಕ್ಷತ್ರ ವನ್ನು ತೋರಿಸುವ ಸಂಪ್ರದಾಯವಿದೆ. ಈ ನಕ್ಷತ್ರ ಯಾರಿಗೆ ಕಾಣಿಸುವುದಿಲ್ಲವೋ ಅವರಿಗೆ ಸಾವು ಸನ್ನಿಹಿತವಾಗಿದೆ ಎಂದು ಅರ್ಥವಂತೆ !

ಕರ್ದಮ ಮುನಿಯ ಮಗಳು ಊರ್ಜಾದೇವಿ ವಸಿಷ್ಠನಿಗೆ ಹೆಂಡತಿಯೆನ್ನುತ್ತದೆ ಬ್ರಹ್ಮಾಂಡ ಪುರಾಣ. ಅವಳಿಂದ ಆತನಿಗೆ 7 ಮಂದಿ ಮಗಂದಿರು ಮತ್ತು ಒಬ್ಬ ಮಗಳು ಜನಿಸಿದ ಪ್ರಸ್ತಾಪವಿದೆ. ಅರುಂಧತಿಯಿಂದ ನೂರಾರು ಮಕ್ಕಳನ್ನು ಪಡೆದ ನೆಂಬ ಉಲ್ಲೇಖವೂ ಇದೆ. ಋಗ್ವೇದದಲ್ಲಿ ವಸಿಷ್ಠನು ಬೆಳ್ಳಗಿನ ಮೈ ಬಣ್ಣದವರೂ ಜಡೆಯನ್ನು ತಲೆಯ ಮೇಲು ಭಾಗದಲ್ಲಿ ಬಲಗಡೆಗೆ ಕಟ್ಟುವರೆಂದೂ ಹೇಳಿದೆ.

ಸೂರ್ಯವಂಶದ ರಾಜ ಸುದಾಸ ಒಮ್ಮೆ ರಾಕ್ಷಸನನ್ನು ಕೊಂದ. ಆ ರಾಕ್ಷಸನ ಜೊತೆಗಾರ ಅವನ ಮೇಲೆ ಸೇಡು ತೀರಿಸಲು ಕಾದುಕೊಂಡಿದ್ದ. ಒಂದು ಸಲ ರಾಜನು ಕುಲಗುರು ವಸಿಷ್ಠನಿಂದ ಒಂದು ಯಜ್ಞ ಮಾಡಲು ಸಿದ್ಧತೆ ನಡೆಸಿದ. ವಸಿಷ್ಠನು ಸ್ನಾನಕ್ಕೆ ಹೋದಾಗ ರಾಕ್ಷಸನು ವಸಿಷ್ಠನ ವೇಷದಿಂದ ರಾಜನ ಬಳಿಗೆ ಬಂದು "ನನಗೆ ಭೋಜನಕ್ಕೆ ಮಾಂಸಾಹಾರ ಬೇಕು" ಎಂದು ಬೇಡಿದ. ಸೌದಾಸ ಅದಕ್ಕೆ ಒಪ್ಪಿ, ಸ್ನಾನ ಮುಗಿಸಿ ಬಂದ ವಸಿಷ್ಠನಿಗೆ ಅದನ್ನು ಬಡಿಸಲು ಹೇಳಿದ. ರಾಕ್ಷಸನ ಮಾಯೆಯಿಂದ ವಸಿಷ್ಠನಿಗೆ ಮನುಷ್ಯ ಮಾಂಸದ ಅಡಿಗೆ ಬಡಿಸಲ್ಪಟ್ಟಾಗ ರಾಜನಿಗೆ ರಾಕ್ಷಸ ಜನ್ಮ ಬರಲೆಂದು ವಸಿಷ್ಠನು ಶಾಪ ಕೊಟ್ಟ.

ವಸಿಷ್ಠನ ಮೇಲೆ ದ್ವೇಷ ತಾಳಿದ್ದ ವಿಶ್ವಾಮಿತ್ರನು ಸೌದಾಸನ ಮೇಲೆ ಕಿಂಕರ ಎಂಬ ರಾಕ್ಷಸನನ್ನು ಆವೇಶಗೊಳಿಸಿ ವಸಿಷ್ಠನ 100 ಮಂದಿ ಮಕ್ಕಳನ್ನು ಅವನಿಂದ ಕೊಲ್ಲಿಸಿದ. (ಆಗ ದುಃಖದಲ್ಲಿ ವಸಿಷ್ಠನು ಆತ್ಮಹತ್ಯೆ ಮಾಡಿಕೊಳ್ಳಲು ನದಿಯೊಂದಕ್ಕೆ ಹಾರಿದ. ಬ್ರಹ್ಮಹತ್ಯಾ ಪಾತಕದ ಭಯದಿಂದ ನದಿ ಅವನನ್ನು ಮರಳಿ ದಡಕ್ಕೊಗೆದು ವಿಪಾಶಾ ಎಂಬ ಹೆಸರು ಹೊಂದಿತು.) ಸೌದಾಸನು ಕ್ರೀಡಾಸಕ್ತರಾಗಿದ್ದ ಬ್ರಾಹ್ಮಣ ದಂಪತಿಗಳಿಬ್ಬರನ್ನು ಕಂಡು ಬ್ರಾಹ್ಮಣನನ್ನು ಹಿಡಿದು ತಿಂದಾಗ ಬ್ರಾಹ್ಮಣನ ಹೆಂಡತಿ ಆಂಗೀರಸಿಯು ದುಃಖದಿಂದ "ನೀನು ಸ್ತ್ರೀ ಸಂಪರ್ಕ ಮಾಡಿದೊಡನೆಯೇ ಸತ್ತು ಹೋಗು" ಎಂದು ಶಪಿಸಿದಳು. 12 ವರ್ಷ ಕಳೆದ ಮೇಲೆ ಸೌದಾಸನಿಗೆ ರಾಕ್ಷಸ ಜನ್ಮ ನೀಗಿದರೂ ಬ್ರಾಹ್ಮಣಿಯು ಶಾಪ ನೀಗಲಿಲ್ಲ. ಆಗ ವಸಿಷ್ಠನು ಸೌದಾಸನ ವಂಶೋದ್ಧಾರಕ್ಕಾಗಿ ಸೌದಾಸನ ರಾಣಿ ಮದಯಂತಿಗೆ ಅಶ್ಮಕ ಎಂಬ ಮಗನನ್ನು ಕರುಣಿಸಿದ.

ಸಗರನ ಮಕ್ಕಳು ಕಪಿಲ ಮುನಿಯ ಕೋಪಕ್ಕೆ ತುತ್ತಾಗಿ ಭಸ್ಮೀ ಭೂತರಾದರು. ಅವರ ಸದ್ಗತಿಗಾಗಿ ಗಂಗೆಯನ್ನು ಒಲಿಸಿ ತರಲು ಭಗೀರಥನಿಗೆ ವಸಿಷ್ಠನೇ ಆದೇಶಿಸಿದ.

ದಿಲೀಪನಿಗೂ ಸಂತಾನವಾಗಲಿಲ್ಲ. ಆತನೂ ವಸಿಷ್ಠನ ಆದೇಶದಿಂದ ನಂದಿನಿಯನ್ನು ಸೇವಿಸಿ ಅವಳು ಕೊಟ್ಟ ಕಷ್ಟಕೋಟಲೆಗಳನ್ನೆಲ್ಲ ಸಹಿಸಿಕೊಂಡು ಮಕ್ಕಳನ್ನು ಹೊಂದಿದ. ತ್ರಿತ್ಸುದೇಶವನ್ನು ವೈರಿಗಳು ಮುತ್ತಿದಾಗ ದೇಶವು ದಾರಿದ್ರ್ಯ, ಅರಾಜಕತೆಯಿಂದ ಬಳಲತೊಡಗಿತು. ಅದನ್ನು ಆಳುತ್ತಿದ್ದ ರಾಜ ಭರತನ ಬೇಡಿಕೆಯನ್ನು ಮನ್ನಿಸಿ ವಸಿಷ್ಠನು ಇಂದ್ರನನ್ನು ಪ್ರಾರ್ಥಿಸಿದ. ಇಂದ್ರನು ಧಾವಿಸಿ ಶತ್ರುಗಳನ್ನು ಓಡಿಸಿದ ವೃತ್ತಾಂತ ಋಗ್ವೇದದಲ್ಲಿದೆ.

ವೇದದಲ್ಲಿ ಬರುವ ಇನ್ನೊಂದು ಕತೆ ಸುದಾಸನದು. ವಿಶ್ವಾಮಿತ್ರನ ಪೌರೋಹಿತ್ಯದಲ್ಲಿ ಆತ ಅಶ್ವಮೇಧ ಯಾಗವನ್ನು ಮಾಡಿ ಪೃಥ್ವಿಯ ರಾಜರನ್ನೆಲ್ಲ ಸೋಲಿಸಿದ. ಈ ಅಹಂಕಾರದಿಂದ ಆತ ಬೀಗುತ್ತಿದ್ದಾಗ ಸೋತ ರಾಜರೆಲ್ಲರೂ ಒಟ್ಟಾಗಿ ಅವನ ಮೇಲೆ ಏರಿ ಬಂದರು. ಆ ಸೇನಾ ಸಾಗರದೆದುರು ಹೋರಾಡಲಾರದೆ ಆತ ವಸಿಷ್ಠನ ಮೊರೆ ಹೊಕ್ಕ. ವಸಿಷ್ಠನು ಪಾಶದ್ಯುಮ್ನ ಯೋಗದಿಂದ ಇಂದ್ರನನ್ನು ಒಲಿಸಿ, ಶತ್ರುಗಳನ್ನು ಧೂಳೀಪಟಗೊಳಿಸಿದ. ಅದರಿಂದ ಸುದಾಸ ರಾಜನು ವಿಶ್ವಾಮಿತ್ರನ ಬದಲು ವಸಿಷ್ಠನನ್ನೇ ಪುರೋಹಿತನನ್ನಾಗಿ ಮಾಡಿಕೊಂಡ.

ಅದರಿಂದ ವಸಿಷ್ಠನನ್ನು ವಿಶ್ವಾಮಿತ್ರನು ದ್ವೇಷಿಸಲಾರಂಭಿಸಿದ. ವಸಿಷ್ಠನ ಮೇಲೆ ದ್ವೇಷವಿದ್ದ ಜಮದಗ್ನಿಯಿಂದ ಸಸರ್ಪರಿ ವಿದ್ಯೆಯನ್ನು ಕಲಿತು ಸೂರ್ಯನನ್ನು ಒಲಿಸಿಕೊಂಡು ಅಧಿಕ ಬಲವನ್ನು ಗಳಿಸಿದ. ಸುದಾಸನ ಮಕ್ಕಳಿಗೆ ದುರ್ಬೋಧನೆ ನೀಡಿ ವಸಿಷ್ಠನ ಮಗ ಶಕ್ತಿಯನ್ನು ಅಗ್ನಿ ಕುಂಡಕ್ಕೆ ಹಾಕಿಸಿದ. ಆದರೂ ವಸಿಷ್ಠ ಕುಪಿತನಾಗಲಿಲ್ಲ.

ಇಕ್ಷ್ವಾಕು ವಂಶದಲ್ಲಿ ಶ್ರೀ ಹರಿಯು ಜನ್ಮ ತಳೆಯಲಿರುವ ಕಾರಣ ಆ ವಂಶದ ಪೌರೋಹಿತ್ಯವನ್ನು ವಸಿಷ್ಠನೇ ಸ್ವೀಕರಿಸಬೇಕೆಂದು ಶಿವನು ಒತ್ತಾಯಿಸುವ ಉಲ್ಲೇಖವಿದೆ. ಶ್ರೀ ರಾಮನಿಗೆ ಅವನು ಬೋಧಿಸಿದ ಜೀವನದ ಸತ್ಯ ಸ್ವರೂಪದ 30 ಸಾವಿರ ಶ್ಲೋಕಗಳು 'ಯೋಗ ವಾಸಿಷ್ಠ' ವೆಂದೂ ಅದರ ಸಂಹಿತೆ 'ಲಘು ಯೋಗ ವಾಸಿಷ್ಠ' ವೆಂದೂ ಹೆಸರಾಗಿದೆ.

ವಸಿಷ್ಠನು ವರುಣನನ್ನು ಒಂದು ಸಲ ಸ್ತುತಿಸಿದ. ವರುಣನು ಅದನ್ನು ಮೆಚ್ಚಿಕೊಂಡು ವಸಿಷ್ಠನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿದ. ದೋಣಿಯಲ್ಲಿ ಅವನನ್ನು ಕುಳ್ಳಿರಿಸಿ ವಿಹಾರ ಮಾಡಿಸಿದ. ಅದೇ ರೀತಿ ವಸಿಷ್ಠ ಅಗ್ನಿ, ಇಂದ್ರ, ಸವಿತಾ, ವಿಧಾತಾ, ಮೊದಲಾದ ದೇವತೆಗಳ ಪ್ರೀತಿಗೂ ಪಾತ್ರನಾದ. ಜರೂಥನೆಂಬ ರಾಕ್ಷಸ ವಸಿಷ್ಠನ ಯಜ್ಞಕ್ಕೆ ತೊಂದರೆ ಕೊಟ್ಟಾಗ ವಸಿಷ್ಠನ ಆಜ್ಞೆಯಂತೆ ಅಗ್ನಿ ಅವನನ್ನು ಸುಟ್ಟು ಹಾಕಿದ. ವಸಿಷ್ಠನು ಪುರಾಣ ಸಂಹಿತೆಗಳನ್ನು ಕಲ್ಪ, ಸ್ಮೃತಿ

ತಂತ್ರ, ಧರ್ಮ ಸೂತ್ರಾದಿಗಳನ್ನು ಬರೆದು ಲೋಕೋಪಕಾರ ಮಾಡಿದ. ಆತ ಹೆಣ್ಣು ಹುಲಿಯಿಂದ ಸಂತಾನ ಪಡೆದ ಕತೆಯೂ ಇದೆ.

ಇಂದ್ರನಿಗೆ ರಾಕ್ಷಸರ ಪೀಡೆಯುಂಟಾದಾಗ ವಸಿಷ್ಠನು ತನ್ನ ತೇಜಸ್ಸಿನಿಂದ ರಾಕ್ಷಸರನ್ನು ನಿಗ್ರಹಿಸಿದ್ದೂ ಇದೆ. ಋಷಿಗಳು ಹೀನ ಯೋನಿಯಲ್ಲಿ ಜನಿಸಿದರೂ ತಪಸ್ಸು, ವಿದ್ಯೆಗಳ ಕಾರಣದಿಂದ ಮಹಿಮಾನ್ವಿತರೆಂದು ಆತ ಸಾಧಿಸಿದ.

ಒಮ್ಮೆ ಅಗ್ನಿ ಕಾರ್ತವೀರ್ಯನಲ್ಲಿ ಆಹಾರ ಬೇಡಿದಾಗ ಸುತ್ತು ಮುತ್ತಲಿನ ಆರಣ್ಯಗಳನ್ನೇ ಸುಡುವಂತೆ ಆತ ಹೇಳಿದ. ಅದರಿಂದ ವಸಿಷ್ಠನ ಆಶ್ರಮವೂ ಬೂದಿಯಾಯಿತು. ಆಗ ಕಾರ್ತವೀರ್ಯನ ಸಾವಿರ ತೋಳುಗಳನ್ನು ಪರುಶುರಾಮನು ಕತ್ತರಿಸಲೆಂದು ವಸಿಷ್ಠ ಶಪಿಸಿದ.

ಒಂದು ಸಲ ರಾಕ್ಷಸ ದಂಪತಿಗಳಿಬ್ಬರು ಹುಲಿಯ ರೂಪ ತಳೆದು ಕ್ರೀಡಿಸುತ್ತಿದ್ದಾಗ ಅಯೋಧ್ಯೆಯ ರಾಜ ಮಿತ್ರಸಹ ಬೇಟೆಗಾಗಿ ಕಾಡಿಗೆ ಬಂದಿದ್ದ. ಅವನ ಬಾಣದಿಂದ ಹೆಣ್ಣು ಹುಲಿಯಾಗಿದ್ದ ರಾಕ್ಷಸಿ ಪ್ರಾಣ ಬಿಟ್ಟಳು. ಆಗ ರಾಕ್ಷಸನು ಸೇಡು ತೀರಿಸಿಕೊಳ್ಳಲು ಅಡಿಗೆಯವನ ರೂಪದಿಂದ ಮಿತ್ರಸಹನ ಪಾಕಶಾಲೆಗೆ ಸೇರಿಕೊಂಡು ಅದೊಂದು ಸಲ ಅತಿಥಿ ಯಾಗಿ ಬಂದ. ವಸಿಷ್ಠನಿಗೆ ಮಾಂಸದ ಅಡಿಗೆಯನ್ನು ಬಡಿಸಿದ. ಅದರಿಂದ ವಸಿಷ್ಠನು ಕೃದ್ಧನಾಗಿ ರಾಜನಿಗೆ ಮಾಂಸಭಕ್ಷಕನಾದ ರಾಕ್ಷಸ ಜನ್ಮವೇ ಬರಲೆಂದು ಶಪಿಸಿದ.

ರಾಕ್ಷಸನಾದ ಮಿತ್ರಸಹ ವಸಿಷ್ಠನ ಮಗನಾದ ಶಕ್ತಿಯನ್ನೇ ಕೊಂದು ತಿಂದ. ಮಗನ ಸಾವಿನಿಂದ ದುಃಖತಪ್ತನಾದ ವಸಿಷ್ಠ ಹಲವು ಬಾರಿ ಆತ್ಮಹತ್ಯೆಗೆ ಪ್ರಯತ್ನಿಸಿದರೂ ವಿಫುಲನಾಗಿ ಆಶ್ರಮಕ್ಕೆ ಬಂದಾಗ ಗರ್ಭಿಣಿಯಾದ ಸೊಸೆ ಅದೃಶ್ಯಂತಿಯ ಗರ್ಭದಿಂದ ಶಿಶುವಿನ ವೇದಾಧ್ಯಯನದ ಧ್ವನಿ ಅವನಿಗೆ ಕೇಳಿಸಿತು. ಅದರಿಂದ ಅವನಿಗೆ ಬದುಕಿನಲ್ಲಿ ಆಸೆ ಚಿಗುರಿತು. ಆತ್ಮಹತ್ಯೆಯ ಯೋಚನೆಯನ್ನು ತ್ಯಜಿಸಿದ. ಮಗನ ಅಗಲುವಿಕೆಯಿಂದ ಪರಾಶ (ಬದುಕಿನ ಆಸೆಯನ್ನು ಕೈ ಬಿಟ್ಟವ) ನಾದವನಿಗೆ ಬದುಕಿನಲ್ಲಿ ಮತ್ತೆ ಆಸೆಯನ್ನು ಮೂಡಿಸಿದ ಆ ಮಗುವಿಗೆ ಪರಾಶರ ಎಂದು ಹೆಸರಿಟ್ಟ.

ಆದರೂ ವಸಿಷ್ಠನು ಶಿವನೊಂದಿಗೆ ಕೀರ್ತಿಶಾಲಿಯೂ ತಪಸ್ವಿಯೂ ಯೋಗಿ ವರ್ಯನೂ ವೇದ ವಿಭಾಗಕರ್ತನೂ ಆದ ಮಗನನ್ನು ಕರುಣಿಸಲು ಬೇಡಿದ. (ಶಿವನ ಕೃಪೆಯಿಂದ ವಸಿಷ್ಠನ ಮೊಮ್ಮಗ ಪರಾಶರನಿಗೆ ಅಂತಹ ಮಹಿಮಾನ್ವಿತನಾದ ವ್ಯಾಸನು ಜನಿಸಿದ)

ತನ್ನ ತಂದೆಯಾದ ಶಕ್ತಿಯು ರಾಕ್ಷಸರಿಂದ ಹತನಾದನೆಂದು ತಿಳಿದಾಗ ಪರಾಶರನು ದಾನವಯಾಗವನ್ನು ಆರಂಭಿಸಿ ರಾಕ್ಷಸ ಕುಲದ ನಾಶಕ್ಕೆ ಸಿದ್ಧನಾದ. ಆಗ

ವಸಿಷ್ಠನೂ ಪುಲಸ್ತ್ಯನೇ ಮೊದಲಾದ ಮುನಿಗಳೂ "ಒಬ್ಬ ರಾಕ್ಷಸ ಎಸಗಿದ ತಪ್ಪಿಗಾ ಇಡೀ ಕುಲವನ್ನೇ ನಾಶ ಮಾಡುತ್ತೇನೆ ಎನ್ನುವುದು ಸರಿಯಲ್ಲ. ರಾಕ್ಷಸ ಕುಲ ಲ್ಲಿಯೂ ಸಾತ್ವಿಕರಾದವರು ಅನೇಕರಿದ್ದಾರೆ. ಅವರು ನಾಶವಾಗಬಾರದು" ಎಂದ ಹೇಳಿದರು.

ಅವರ ಮಾತಿನಂತೆ ಪರಾಶರನು ಯಾಗವನ್ನು ನಿಲ್ಲಿಸಿದ. ಸಕಲ ಶಾಸ್ತ್ರ ಪ ಣತನಾದ ಆತ ಆಡಿದ್ದೆಲ್ಲವೂ 'ಪರಾಶರ ಸ್ಮೃತಿ' ಎಂಬ ಕಲಿಯುಗದ ಆಧಾರಗ್ರಂ ಭಾಗವತವನ್ನು ಮೊದಲು ಹರಿಯು ಬ್ರಹ್ಮನಿಗೆ ಹೇಳಿದ. ಬ್ರಹ್ಮನು ಶೇಷನಿಗೂ ಶೇಷನು ಸನತ್ಕುಮಾರನಿಗೂ ಹೇಳಿದರು. ಸನತ್ಕುಮಾರನಿಂದ ಸಾಂಖ್ಯಾಯನನಿ ಅವನಿಂದ ಪರಾಶರನಿಗೆ ಬೋಧಿಸಲ್ಪಟ್ಟ ಭಾಗವತ ಮೈತ್ರೇಯ, ವಿದುರರ ಮೂಲ ಲೋಕ ಪ್ರಸಿದ್ಧವಾಯಿತು.

ಅಗ್ನಿಷ್ವಾತ್ತನ ಮಾನಸ ಕುವರಿಯನ್ನು ನಾರದನು ಮೋಹಿಸಿದ. ಆಕೆ ಅವನಿ ಒಲಿಯದಾದಾಗ ಹೀನ ಕುಲದಲ್ಲಿ ಜನಿಸುವಂತೆ ಶಪಿಸಿದ. ಆಕೆ ದಾಶರಾಜನ ಮ ಳಾಗಿ ಮತ್ಸ್ಯಗಂಧಿ ಎಂಬ ಹೆಸರಿನಿಂದ ಜನಿಸಿದಳು. ದೋಣಿ ನಡೆಸುತ್ತಿದ್ದ ಅವಳನ್ನು ಪರಾಶರನು ಮೋಹಿಸಿ ಕೂಡಿದುದರ ಫಲ ವೇದವ್ಯಾಸನ ಜನನ.

ನಾಲ್ಕು ವರ್ಣಗಳವರಿಗೂ ನಾಲ್ಕು ಆಶ್ರಮಗಳಿಗೂ ತಕ್ಕುದಾದ ಧರ್ಮವನ್ನು ನಿರೂಪಿಸಿದ್ದು, ಯತಿಗಳನ್ನು ಸೇವಿಸಿದರೆ ಸಿಗುವ ಫಲವನ್ನು ವರ್ಣಿಸಿದ್ದು, ಮರಣ ಸೂಚಕ ಕುರುಹುಗಳು, ಪಾಪ ಪುಣ್ಯಗಳ ಫಲಾಫಲಗಳನ್ನು ವಿವರಿಸಿದ್ದು ಪರಾಶರನೇ. ಜನಕರಾಜನೊಂದಿಗೆ ಆತ ನಡೆಸಿದ ಆಧ್ಯಾತ್ಮಿಕ ಸಂವಾದ ಪರಾಶರ ಗೀತೆಯೆಂದು ಪ್ರಖ್ಯಾತ. ಅವನನ್ನು ಗೋತ್ರಪ್ರವರ್ತಕ ಎಂದು ಮತ್ಸ್ಯಪುರಾಣ ಹೇಳುತ್ತದೆ.

ಅಗ್ನಿ, ವಾಯು, ಭೂಮಿ, ಜಲಕ್ಕೆ ಸಮನಾದ ಮಗನು ತನಗೆ ಜನಿಸ ಬೇಕೆಂದು ವ್ಯಾಸನು ಶಿವನಲ್ಲಿ ವರವನ್ನು ಕೇಳಿ ಪಡೆದುಕೊಂಡ. ಬಳಿಕ ಹೆಣ್ಣು ಗಿಳಿಯ ರೂಪದಿಂದ ಬಂದ ಘೃತಾಚಿ ಎಂಬ ಅಪ್ಸರೆಯನ್ನು ಕೂಡಿ ಶುಕ ಎಂಬ ಮಗನನ್ನು ಪಡೆದ. ಶುಕನಿಗೆ ಜ್ಞಾನೋಪದೇಶ ನೀಡಲು ಶಿವನನ್ನೇ ಬೇಡಿದ. ಶಿವನು ನಾನು "ಜ್ಞಾನೋಪದೇಶ ನೀಡುತ್ತೇನೆ. ಆದರೆ ಆಮೇಲೆ ನನ್ನನ್ನು ಶಪಿಸ ಬಾರದು" ಎಂದು ಹೇಳಿ ಪರಬ್ರಹ್ಮ ಸ್ವರೂಪವನ್ನು ಬೋಧಿಸಿದ. ಅದನ್ನು ಕೇಳಿ ಪ್ರಾಪಂಚಿಕ ಜೀವನ ಬಂಧನವನ್ನೇ ಕಳೆದುಕೊಂಡ.

ದೈವಜ್ಞಾನದಲ್ಲಿ ತಲ್ಲೀನನಾಗಿ ಓಡುತ್ತಿದ್ದ ಶುಕನನ್ನು ಕರೆಯುತ್ತ ವ್ಯಾಸ ಹಿಂಬಾಲಿಸಿದಾಗ ಅವನಿಗದು ಗೊತ್ತೇ ಆಗಲಿಲ್ಲ. ಗಂಗಾ ನದಿಯ ತೀರದಲ್ಲಿ ನಗ್ನ ರಾಗಿ ಸ್ನಾನ ಮಾಡುತ್ತಿದ್ದ ಯುವತಿಯರು ಲಿಂಗಪ್ರಜ್ಞೆ ಕಳೆದುಕೊಂಡಿದ್ದ ಅವನನ್ನು ನೋಡಿ ನಾಚಲಿಲ್ಲ. ಆದರೆ ವ್ಯಾಸನು ಅಲ್ಲಿಗೆ ಬರುತ್ತಲೇ ಬಟ್ಟೆಯಿಂದ ಮೈಮುರೆಸಿ ಕೊಂಡರಂತೆ.

ವ್ಯಾಸನಿಂದ ಮೋಕ್ಷಧರ್ಮವನ್ನು ಅಭ್ಯಸಿಸಿ ಅದನ್ನು ಜನಕರಾಜನಿಗೆ ಬೋಧಿ ಸಲು ಶುಕ್ರ ಹೋದಾಗ ದ್ವಾರಪಾಲಕರು ತಡೆದರು. ಆದರಿಂದ ಅವನಿಗೆ ಕೋಪ ಬರಲಿಲ್ಲ. ಬಳಿಕ ಜನಕನು ಅವನನ್ನು ಸ್ವಾಗತಿಸಿ ಬ್ರಹ್ಮವಿದ್ಯೆಯನ್ನು ನಾರದನಿಂದಲೂ ಕಲಿತು ಕೈಲಾಸಕ್ಕೆ ಹೋಗಿ ಮೋಕ್ಷ ಹೊಂದಿದ. ಪಿತೃಕನ್ಯೆಯಾದ ಪೀವರಿಯನ್ನು ಮದುವೆಯಾಗಿ ಆಗ ಹಲವು ಮಕ್ಕಳನ್ನು ಪಡೆದ. ಪರೀಕ್ಷಿತನಿಗೆ ಭಾಗವತವನ್ನೂ ಈತ ಬೋಧಿಸಿದ.

# " ಸಂಶೋಧಕನ ದೃಷ್ಟಿಯಲ್ಲಿ ಶೈವಧರ್ಮ "

—ಕೆ. ರಮಾನಂದ

ಸಂಶೋಧಕನೊಬ್ಬ ತನ್ನ ಸಂಶೋಧನೆಗೆ ವಿಷಯವನ್ನು ಆಯ್ಕೆ ಮಾಡುವಾಗ 'ಶೈವಧರ್ಮ'ವನ್ನು ಆಯ್ಕೆ ಮಾಡಬಹುದು. ಏಕೆಂದರೆ ಶೈವಧರ್ಮದ ವಿಷಯವು ವಿಪುಲವಾಗಿಯೂ, ವಿವರವಾಗಿಯೂ, ಕುತೂಹಲಕಾರಿಯಾಗಿಯೂ ಇದೆ. ಸಂಶೋಧನೆ ಮಾಡಿದಷ್ಟು ಶೈವಧರ್ಮದಲ್ಲಿ ಹೊಸ ಹೊಸ ವಿಷಯಗಳು ಸಿಕ್ಕಬಹುದು.

ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಬೌದ್ಧ-ಜೈನಧರ್ಮಗಳಂತೆಯೇ ಶೈವಧರ್ಮವೂ ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿದೆ. ಶೈವಧರ್ಮದ ಪ್ರಾಚೀನತೆಯು ಬಹಳಷ್ಟು ಹಿಂದಿನದು. ವೇದಗಳು, ಉಪನಿಷತ್ತುಗಳು, ಸಂಹಿತೆಗಳು ಮೊದಲಾದವುಗಳಲ್ಲಿಯೇ ರುದ್ರನ ಹೆಸರು ಶೈವವೇದಾಂತ ತತ್ವಗಳ ಉಲ್ಲೇಖವನ್ನು ಕಾಣಬಹುದಾಗಿದೆ. ಅಷ್ಟೇಕೆ 'ಆರ್ಯಪೂರ್ವದ ಸಿಂಧೂ ಸಂಸ್ಕೃತಿಯಲ್ಲಿ ಶಿವಾರಾಧನೆ ಇದ್ದಿತೆಂದೂ, ಶಿವನನ್ನು ಪಶುಪತಿಯ ರೂಪದಲ್ಲಿ ಪೂಜಿಸುತ್ತಿದ್ದರೆಂದೂ ಹರಪ್ಪಾ-ಮೊಹೆಂಜೋದಾರೊಗಳಲ್ಲಿ ಸಿಕ್ಕಿರುವ ಅವಶೇಷಗಳಿಂದ ವ್ಯಕ್ತಪಡುತ್ತದೆ ಎಂದು 'ಸರ್‌ಜಾನ್‌ಮಾರ್ಷಲ್' ಅಭಿಪ್ರಾಯಪಟ್ಟಿದ್ದಾರೆ.[1]

ಶೈವಧರ್ಮದಲ್ಲಿ ಅಧಿದೇವತೆಯ ಸ್ಥಾನವನ್ನು ಪಡೆದು 'ಶಿವ' ಎಲ್ಲರಿಂದಲೂ ಪೂಜಿತನಾಗುತ್ತಾ ಬಂದಿದ್ದಾನೆ. ಬಹಳ ಹಿಂದೆಯೇ ಭಾರತದಲ್ಲಿ ಶಿವಪೂಜೆಯು ನಡೆಯುತ್ತಿದ್ದು ಭಾರತದ ನಾನಾಭಾಗಗಳಲ್ಲಿ ಶಿವಲಿಂಗಗಳು ಪ್ರತಿಷ್ಠಾಪಿತವಾಗಿದ್ದವು. ಅದರಲ್ಲೂ ಭಾರತದಾದ್ಯಂತ ದ್ವಾದಶಜ್ಯೋತಿರ್ಲಿಂಗಗಳು ಪ್ರಮುಖವಾಗಿದ್ದವು. ಅವು ಯಾವುವೆಂದರೆ ವಾರಣಾಸಿಯಲ್ಲಿ ವಿಶ್ವೇಶ್ವರ, ಸೌರಾಷ್ಟ್ರದ ಸೋಮನಾಥ, ಶ್ರೀಶೈಲದ ಮಲ್ಲಿಕಾರ್ಜುನ, ಉಜ್ಜಯನಿಯ ಮಹಾಕಾಲ, ದೌಲತಾಬಾದಿನ ಘೃಶ್ಮೇಶ್ವರ, ಓಂಕಾರದ ಅಮಲೇಶ್ವರ, ನಾಸಿಕದ ತ್ರ್ಯಂಬಕೇಶ್ವರ, ಹಿಮಾಲಯದ ಕೇದಾರೇಶ್ವರ, ಪರಳಿಯ ವೈದ್ಯನಾಥ, ಡಾಕಿನೀಯ ಭೀಮಶಂಕರ, ದಾರುಕಾವನದ ನಾಗೇಶ್ವರ ಹಾಗು ದಕ್ಷಿಣ ಭಾರತದ ರಾಮೇಶ್ವರ. ವಿಷ್ಣುವಿನಂತೆಯೇ ತನ್ನ ಲೀಲೆಗಳನ್ನು 12 ಅವತಾರಗಳಲ್ಲಿ ತೋರಿಸಿದ ಶಿವನ 12 ಪ್ರಸಿದ್ಧ ಕ್ಷೇತ್ರಗಳಿವು ಎಂದೂ ಊಹಿಸಬಹುದಾಗಿದೆ.

1 ಕರ್ನಾಟಕದ ಪರಂಪರೆ -(ಭಾಗ 1) ಪು. ಸಂ. 527 ಮೂಲ ಲೇಖಕ ಡಾ|| ಜೆ. ರುದ್ರಪ್ಪ

ಈ ಜ್ಯೋತಿರ್ಲಿಂಗಗಳನ್ನು ಸ್ಮರಿಸಿದರೆ ಸಾಕು ಮಾನವನ ಸಮಸ್ತ ಪಾಪವೂ ಪರಿಹಾರವಾಗುತ್ತದೆ ಎಂದು 'ಶಿವ ಪುರಾಣದ ಕೋಟಿರುದ್ರ ಸಂಹಿತೆಯಲ್ಲಿ ಹೇಳಲಾಗಿದೆ. ಸ್ಮರಣ ಮಾತ್ರದಿಂದ ಪಾಪ ನಾಶವಾಗುವುದಾದರೆ ಇನ್ನು ಆಯಾ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿನ ನದಿಗಳಲ್ಲಿ ಮಿಂದರೆ ಮಾನವನಿಗೆ ಮುಕ್ತಿಮಾರ್ಗ ದೂರವೇನಿಲ್ಲ. ದ್ವಾದಶ ಲಿಂಗಗಳ ಬಗೆಗೂ ಸಂಶೋಧಕ ಅಧ್ಯಯನ ಮಾಡಬಹುದು.

ಶೈವಧರ್ಮವನ್ನು ಅನುಕರಿಸುವವರು ಲಿಂಗದ ಉಪಾಸಕರು. ಅವರಿಗೆ ಲಿಂಗವೇ ಧರ್ಮದ ಚಿಹ್ನೆಯಾಗಿದೆ. ಲಿಂಗ ಶಬ್ದ ವೇದಗಳಲ್ಲೂ ಕಂಡುಬರುತ್ತದಂತೆ. ಅದಕ್ಕೆ ಅನೇಕ ನಿಷ್ಪತ್ತಿಗಳನ್ನು ಪ್ರಾಚೀನ-ಆಧುನಿಕ ವಿದ್ವಾಂಸರು ಕೊಟ್ಟಿದ್ದಾರೆ. "ತೈತ್ತರೀಯ ನಾರಾಯಣೋಪನಿಷತ್ತಿನಲ್ಲಿ ಶಿವನನ್ನು ಲಿಂಗರೂಪದಲ್ಲಿ ಪೂಜಿಸಲು ಎಲ್ಲಾ ಜೀವಗಳೂ ಲಿಂಗದಲ್ಲೇ ಉದ್ಭವಿಸಿ ಅಲ್ಲೇ ವಿಲೀನವಾಗುತ್ತದೆ ಎಂಬುದಾಗಿದೆ.

ಲಿಯತೇಯತ್ರ ಭೂತಾನಿ, ನಿರ್ಗಚ್ಛಂತಿ ಪುನಃ ಪುನಃ
ತೇನ ಲಿಂಗಂ ಪರಂ ವ್ಯೋಮನಿಷ್ಕಲಃ ಪರಂ ಶಿವ ||2

'ಸುಕ್ಷ್ಮಾಗಮದ ಆರನೆಯ ಪಟಲದಲ್ಲಿ' ಲಿಂಗದ ವಿವೇಚನೆ ಈ ರೀತಿಯಿದೆ.

ಲೀನಂ ಪ್ರಪಂಚರೂಪಂ ಹಿ ಸರ್ವಮೇತತ್ ಚರಾಚರಂ
ಸರ್ಗಾದ್ಗಮ್ಯತೇ ಭೂಯಃ ತಸ್ಮಾಲ್ಲಿಂಗ ಮುದೀರ್ಯತೇ ||3

ಲಿಂಗವೆಂದರೆ ಆತ್ಮವನ್ನು ಬೆಳಗಿಸುವ ಜ್ಯೋತಿ, ಪರಬ್ರಹ್ಮ ಸ್ವರೂಪದ ಚಿಹ್ನೆ ಎಂದೂ ಕೆಲವು ವಿದ್ವಾಂಸರ ಹೇಳಿಕೆ.[4] –ಲಿಂಗವೆಂಬುದು ಪರಶಿವನ ಪರಮ ಜ್ಞಾನವೆಂದು ಉರಿಲಿಂಗಪೆದ್ದಿ ತಿಳಿಸುತ್ತಾನೆ.[5] ಒಟ್ಟಾರೆಯಾಗಿ ಲಿಂಗವನ್ನು ನಿರಾಮಯ, ನಿರಾಕಾರ, ನಿರ್ಗುಣ, ನಿರ್ಮಲನಾದ ಶಿವನ ಪ್ರತೀಕವೆಂದು ಭಾವಿಸುವುದು ಸೂಕ್ತವಾದುದು.

ಶಿವನ ಪೂಜಾ ವಿಧಾನದಂತೆಯೇ ಶಿವನ ಮಡದಿಯಾದ ಪಾರ್ವತಿಯ ಪೂಜೆಯೂ ಬಹಳ ಹಿಂದೆಯೇ ಭಾರತದಲ್ಲಿದ್ದಿರಬಹುದು. ಕುಶಲಿಯಾದ ಸಂಶೋಧಕನಿಗೆ ಇದು ಉತ್ತಮ ವಿಷಯವಾಗಬಹುದು. ಶಿವನ ಅರ್ಧಾಂಗಿಯ ಹೆಸರು 'ದುರ್ಗಾ' ಎಂಬುದು ಹೆಚ್ಚು ಬಳಕೆಯಲ್ಲಿದೆ ಎಂದು ಪ್ರೊ|| ಜಾಕೋಬಿ ತಿಳಿಸುತ್ತಾರೆ.[6] ಪುರಾಣ

---

2. ಕರ್ನಾಟಕದ ಪರಂಪರೆ ಭಾಗ 1 ಪು.ಸಂ. 528.
3. ಕರ್ನಾಟಕದ ಇತಿಹಾಸ ದರ್ಶನ ಪು.ಸಂ. 730.
4. ಅದೇ ಪು.ಸಂ. 731. ಕೃಷ್ಣರಾವ್ ಕೇಶವಭಟ್ಟ.
5. ಅದೇ ಪು ಸಂ. 731.
6. ಭಗವತಿ ದುರ್ಗಾ ಡಾ|| ವಿಮಲಾ ಪು.ಸ. 145.

ಗಳಲ್ಲಿನ ಪಾರ್ವತಿ, ರೌದ್ರ ಕಳೆಯಾದ ದುರ್ಗಿ, ಸೌಮ್ಯರೂಪದ ಲಲಿತೆ ಎಲ್ಲವೂ ಶಕ್ತಿಯ ಅನೇಕ ಹೆಸರುಗಳಾಗಿವೆ. ದೇವಿಯು ಕರುಣಾಮಯಳು, ಮತ್ತೆಮತ್ತೆ ಅವತರಿಸಿ ಜಗತ್ತಿನ ಪಾಲನೆ ಮಾಡುತ್ತೇನೆ ಎಂದು ತನ್ನ ಭಕ್ತರಿಗೆ ಆಶ್ವಾಸನೆ ನೀಡುವ ಳೆಂದು 'ದುರ್ಗಾಸಪ್ತಶತಿಯು' ದೇವಿಯನ್ನು ವರ್ಣಿಸಿದೆ.

ಇತ್ಥಂ ಯದಾಬಾಧಾ ದಾನವೋತ್ಥಾ ಭವಿಷ್ಯತಿ ।
ತದಾತದಾವತೀರ್ಯಾಹಂ ಕರಿಷ್ಯಾಮ್ಯಂ ಸಂ ಕ್ಷಯಂ ॥7

ದೇವಿಯ ಬಗೆಗೆ ಅನೇಕ ಗ್ರಂಥಗಳು ಬಂದಿದ್ದರೂ ಬೇರೆಬೇರೆ ದೃಷ್ಟಿಗಳಿಂದಲೂ ಸಂಶೋಧನೆ ಸಾಧ್ಯವಾಗಬಲ್ಲದು. ಶಿವ ಮತ್ತು ಪಾರ್ವತಿ ಕಾಮನಿಗೆ ಪ್ರಾಶಸ್ತ್ಯ ನೀಡಿ ಕಾಮೇಶ್ವರ ಕಾಮೇಶ್ವರಿಯಾದರಂತೆ. ಶಿವ–ಶಕ್ತಿಯರು ಒಬ್ಬರಿಲ್ಲದೆ ಇನ್ನೊಬ್ಬರು ಅಪೂರ್ಣರಾಗುತ್ತಾರೆ. ಶಿವಪಾರ್ವತಿಯರ ಈ ಅಭೇದವಾದ ಸಂಯೋಗವೇ ಶಕ್ತಿಯಾಗಿದೆ.

ಶಿವನ ಉಲ್ಲೇಖ ಪ್ರಾಚೀನ ಗೃಹ್ಯಸೂತ್ರಗಳಲ್ಲಿ 'ಹರ' ಎಂದಿದೆ.[8] ಹರ, ಶಂಕರ, ರುದ್ರ, ಮಹೇಶ್ವರ ಇದೇ ಮೊದಲಾದ ಅನೇಕ ಹೆಸರುಗಳು ಕಂಡುಬರುತ್ತವೆ. ದೇವಿಯ ಉಲ್ಲೇಖವು ಅಂತೆಯೇ 7ನೇ ಶತಮಾನದ 'ದುರ್ಗಾಸಪ್ತಶತಿಯಲ್ಲಿ' ವಿವರವಾಗಿ ಬಂದಿದೆ. ದುರ್ಗೆಯನ್ನು ಉಪನಿಷತ್ತು ಅಗ್ನಿವರ್ಣದವಳೆಂದು ವರ್ಣಿಸಿದೆ.

ತಾಂ ಅಗ್ನಿವರ್ಣಾಂ ತಪಸಾ ಜ್ವಲಂತೀಂ[9]

ಶಿವನಿರುವ ಕಡೆಯಲ್ಲೆಲ್ಲಾ ದುರ್ಗೆಯೂ ನೆಲಸಿರುತ್ತಾಳೆ.

ದ್ವೈತ ಪಾಶುಪತ, ದ್ವೈತಾದ್ವೈತ, ದ್ವೈತ ಶೈವಸಿದ್ಧಾಂತ, ಲಕುಲೀಶಪಾಶುಪತ, ವಿಶಿಷ್ಟಾದ್ವೈತ ಶೈವ, ವೀರಶೈವ, ನಂದಿಕೇಶ್ವರ ಶೈವ, ರಸೇಶ್ವರ ಶೈವ, ಕಾಶ್ಮೀರ ಶೈವ ಇತ್ಯಾದಿ ಪ್ರಭೇದಗಳನ್ನು ಹೊಂದಿರುವ ಶೈವಧರ್ಮವು ಭಾರತದ ಸಂಸ್ಕೃತಿಗೆ ಇತಿಹಾಸಕ್ಕೆ ನೀಡಿರುವ ಕಾಣಿಕೆ ಅಪಾರ. ಅನೇಕ ಉದ್ದಾಮ ಕವಿಗಳ ಕೃತಿಗಳನ್ನು, ಮಹಾನ್ ಪುರುಷರನ್ನೂ, ಸಾಧು ಸಂತರನ್ನೂ, ಮಠ ದೇವಾಲಯಗಳನ್ನೂ ಭಾರತಕ್ಕೆ ನೀಡಿರುವ ಶೈವಧರ್ಮ ವಿಶಿಷ್ಟವಾದ ಧರ್ಮವಾಗಿದೆ. ಸಂಶೋಧನೆಯ ದೃಷ್ಟಿಯಿಂದ ನೋಡಿದಾಗ ಅಥವಾ ಸಂಶೋಧಿಸಿದಾಗ ಸಂಶೋಧಕನೊಬ್ಬನಿಗೆ ಶೈವ ಧರ್ಮದ ಬಗೆಗೆ ಇನ್ನೂ ಹೆಚ್ಚಿನ ವಿವರಗಳು ದೊರೆಯಬಹುದು. ಶೈವಾಗಮಗಳು, ರುದ್ರ, ಪಶುಪತಿ, ದುರ್ಗೆ, ಶೈವ ದೇವಾಲಯಗಳು, ಶೈವ ಕವಿಗಳ ಕೃತಿಗಳು-

7. ದುರ್ಗಾಸಪ್ತಶತಿ (11.55).
8. ಕರ್ನಾಟಕದ ಇತಿಹಾಸ ದರ್ಶನ ಕೃಷ್ಣರಾವ್, ಕೇಶವಭಟ್ಟ ಪು.ಸಂ. 730.
9. ತೈತ್ತರೀಯ ಉಪನಿಷತ್ತು Ed. Jyoser P. 188.

ಾಣಗಳು, ದಕ್ಷಿಣ ಭಾರತದ ಶೈವಲೇಖಕರು, ಶಾಸನಗಳಲ್ಲಿ ವೀರಶೈವರು, ಶೈವ ರ್ಮದ ಇತಿಹಾಸ, ಶೈವಧರ್ಮದ ಸಮಕಾಲೀನ ಸಮಾಜ, ಶೈವಧರ್ಮಕ್ಕೆ ಆಗ ತ್ತಿದ್ದ ಅರಸರು ನೀಡಿದ ಪ್ರೋತ್ಸಾಹ" ಇವೇ ಮುಂತಾದ ಅನೇಕ ವಿಷಯಗಳು ೋಧಕನಿಗೆ ಇನ್ನೂ ಹೆಚ್ಚಿನ ಸಂಶೋಧನೆ ಮಾಡಲು ಕುತೂಹಲದ ವಿಷಯಗಳಾ ವವು.

ಸಂಶೋಧನೆ ನಡೆಸಲು ಅನೇಕ ಆಯಾಮಗಳನ್ನು ಹೊಂದಿರುವ 'ಶೈವಧರ್ಮವು ರತದ ಧಾರ್ಮಿಕ ಚರಿತ್ರೆಯಲ್ಲಿ ಮಹತ್ವಪೂರ್ಣವಾದುದಷ್ಟೇ ಅಲ್ಲ! ಸಂಶೋಧನೆಗೂ ಕ್ತವಾದ ಆಯ್ಕೆ ಎಂದು ಬಣ್ಣಿಸುವುದೇ ಈ ಲೇಖನದ ಉದ್ದೇಶ. ●

# ಕಾಯಕದ ಅಣಿಮುತ್ತು
# ಶ್ರೀ ಎಸ್. ಎಸ್. ಬಸವನಾಳರು

ಆಧಾರ : ಕಾಯಕಯೋಗಿ ಶಿವಲಿಂಗಪ್ಪ ಬಸವನಾಳ–ಎಸ್.ಆರ್. ಗುಂಜಾ

ಇಂದು ವಚನಸಾಹಿತ್ಯ ಕೃಷಿ ಮಾಡುತ್ತಿರುವವರು ಹಲವು ಹನ್ನೊ ಪುಣ್ಯಾತ್ಮರು. ವಚನಗಳಿಗಾಗಿ ದುಡಿದವರು ಅನೇಕರು. ಅವುಗಳ ಅಂತರ ಹೊಕ್ಕು ಮಂಗಳದ ಹೊಂಬೆಳಕು ತಂದು ಚೆಲ್ಲಿದ ಹಿರಿಯರಿಂದು ಬೆಳಗಾಗಿ ಹೋ ದ್ದಾರೆ. ಆದರೆ ಅವರು ಬಿತ್ತಿದ ಬೆಳಕು ಬೆಳೆಯುತ್ತಲೇ ಬಂದಿದೆ. ಕನ್ನಡದ ಪು ಭುವನದ ಭಾಗ್ಯ ವಚನಸಾಹಿತ್ಯ. ಅದರ ಚೆಲುವು–ಒಲವಿಗೆ ಅರ್ಪಿಸಿಕೊ ಹಿರಿಯ ಜೀವಗಳಲ್ಲಿ ಒಬ್ಬರು ಶ್ರೀ ಎಸ್. ಎಸ್. ಬಸವನಾಳರು.

ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ. ಪೂರ್ಣ ಹೆಸರು. ತಂದೆ ಯೋಗಪ್ಪ. ತಾಯಿ ಸಿದ್ದಮ್ಮ. ಬಸವನಾಳ ಮನೆತನದ ಹೆಸರು. ಹುಟ್ಟಿದೂ ಹಾವೇರಿ, ಧಾರವಾಡ ಜಿಲ್ಲೆ. ತಂದೆ ತಾಯಿಗಳು ಸದಾಚಾರ ಸಂಪನ್ನರು. ಲಿ ನಿಷ್ಠರು. ಬಸವಣ್ಣನ ವಚನಗಳಿಗೆ ತೆಕ್ಕೆ ಬಿದ್ದವರು, ಮಾರುಹೋದವರು. ಎ ಎಸ್. ಬಸವನಾಳರು ಹುಟ್ಟಿದ್ದು 11–7–1893 ರಂದು. ತಂದೆಯವರ ವ್ಯ ರೈಲ್ವೆ ಇಲಾಖೆಯಲ್ಲಿ ಸ್ಟೇಷನ್ ಮಾಸ್ತರು. ಶಿವಲಿಂಗಪ್ಪ ವಿದ್ಯಾಭ್ಯಾಸದುದ್ದ ಆದರ್ಶ ವಿದ್ಯಾರ್ಥಿ. ಮಾತೃಭಾಷೆ ಕನ್ನಡ. ಶಾಲೆ ಭಾಷೆ ತೆಲುಗು. ತಂದೆ ಕ ಸಿದ್ದು ಸಂಸ್ಕೃತ. ಪ್ರಭಾವ ಬೀರಿದ ಅಧ್ಯಾಪಕರು ಶ್ರೀ ಶಾಂತಪ್ಪ ಗುಮಾಸ್ತ ಚುರುಕು ಬುದ್ಧಿ, ಶೀಘ್ರ ಗ್ರಾಹಿ. ಪ್ರಾಥಮಿಕ ಶಾಲಾಭ್ಯಾಸ ಬಳ್ಳಾರಿ ಜಿಲ್ಲ ಹಲವಾರು ಹಳ್ಳಿಗಳಲ್ಲಿ. ಮಾಧ್ಯಮಿಕ ಶಾಲಾಭ್ಯಾಸ ಬಳ್ಳಾರಿಯ ವಾರಾಡ್ಲಾ ಮಿ ಶಾಲೆ. ಹೈಸ್ಕೂಲಿನ ಓದು ಕಲಿತದ್ದು ಧಾರವಾಡದಲ್ಲಿ. 1910 ರಲ್ಲಿ ಮೆಟ್ರಿ ಪಾಸು. ಅನಂತರ ಡೆಕ್ಕನ್ ಕಾಲೇಜು ಪುಣೆ. ಗ್ರಂಥಾಭ್ಯಾಸದ ಅತೀವ ಹಂಬ ಅದಕ್ಕೊದಗಿದ ಅವಕಾಶ. ಉಪಯೋಗ ಮಾಡಿಕೊಂಡ ಜಾಣ್ಮೆ. ಇತಿಹಾಸ, ಅರ್ಥ ಶಾಸ್ತ್ರಗಳ ಐಚ್ಛಿಕಾಭ್ಯಾಸ, ಕನ್ನಡ ಸಾಹಿತ್ಯದ ಆಕರ್ಷಣೆ, ಆಸಕ್ತಿಯ ಅಭ್ಯಾಸ ಅ ದಿನ ಅಭ್ಯಾಸದಲ್ಲಿ ಕನ್ನಡಕ್ಕೆ ಸ್ಥಾನವಿಲ್ಲದಿರುವ ಕೊರತೆ, ಬದಲು ಸಂಸ್ಕೃತ, ಪಾ ಗಳ ಗೌರವ, ಕುಡಿಯೊಡೆಯಿತು ಮನಸ್ಸು, ಕ್ರಾಂತಿಯ ಕಹಳೆಯಾದಿತು ಪ್ರಾದೇಶಿ ಭಾಷೆ, ಮಾತೃ ಭಾಷೆ, ಪಠ್ಯ ವಿಷಯವಾಗಬೇಕು ಎಂಬ ಸಂಕಲ್ಪ. ಹಳೆಗನ್ನ

ಡುಗನ್ನಡ, ಆಧುನಿಕ ಕನ್ನಡ ಎಲ್ಲ ಓದಿದರು. ಅರಗಿಸಿಕೊಂಡರು. ಬಿ.ಎ. ಮುಗಿ
ಯಿತು. ಅಭ್ಯಾಸ ಮುಂದುವರಿಯಿತು. ತಂದೆ-ತಾಯಿಗಳು ಲಿಂಗೈಕ್ಯರಾದರು.
ರುನೆತನದ ಜವಾಬ್ದಾರಿ. ಹೆಗಲು ಕೊಟ್ಟರು. ಓದು ಬಿಡಲಿಲ್ಲ. 1916 ರಲ್ಲಿ
ಎಂಎ ಪದವಿ ಗಳಿಕೆ. ಮಿತ್ರ ಶ್ರೀ ಎಂ. ಆರ್. ಸಾಖರೆಯವರೊಂದಿಗೆ ಪ್ರಶಸ್ತಿಯಲ್ಲಿ
ಪಾಲು. ಅದು ತಾವೇ ಸೂಚಿಸಿದ್ದು. ಔದಾರ್ಯಕ್ಕೆ ಸಾಕ್ಷಿ. ಹಣಕ್ಕೆ ಬದಲಾಗಿ
ಗ್ರಂಥಗಳ ರೂಪದಲ್ಲಿ ಪ್ರಶಸ್ತಿ ಸ್ವೀಕಾರ; ಅದೂ ತಾವಾಗಿಯೇ ಕೇಳಿ ಪಡೆದದ್ದು.
ಗ್ರಂಥದ ಹುಚ್ಚು ಅಷ್ಟು! "ಗ್ರಂಥಗಳೆಂದರೆ ಸದಾಕಾಲ ನಮ್ಮ ಮಾರ್ಗದರ್ಶಕ
ರಾದ ಗುರುಗಳಂತೆ, ಗೆಳೆಯರಂತೆ" ಆ ನಂಬಿಗೆ ಅವರದು. ಸುಖ ಜೀವನಕ್ಕೆ ಅಂದು
ಸುವರ್ಣಾವಕಾಶ ವಿದ್ಯಾವಂತರಿಗೆ. ಆದರೆ ಬಸವನಾಳರಿಗೆ ಅದು ಜಗ್ಗದ ಮಾರ್ಗ.
ಜನಸೇವೆಗೆ ಕಲಿತ ವಿದ್ಯೆಯ ವಿನಿಯೋಗ. ಅದಕ್ಕಾಗಿ ಮಿತ್ರರ ಸಹಕಾರದೊಡನೆ
ಶಿಕ್ಷಣ ಸಂಸ್ಥೆಯ ಸ್ಥಾಪನೆ.

1916 ಅಂಥದೊಂದು ಶಿಕ್ಷಣಸಂಸ್ಥೆ ತಲೆಎತ್ತಿತು. ಅದೇ "ಕರ್ನಾಟಕ
ಲಿಂಗಾಯತ ಎಜುಕೇಷನ್ ಸೊಸೈಟಿ" ಅದಕ್ಕೆ ಕಾರಣರಾದವರು ಶ್ರೀ ಚಿಕ್ಕೋಡಿ,
ಭಟ್ಟೇಮನಿ, ಸಾಖರೆ, ಹಂಚಿನಾಳ, ಪಾಟೀಲ, ಮಮದಾಪುರ ಮತ್ತು ಬಸವ
ನಾಳರು.

ಅಂದು ಕನ್ನಡ ರೋಗಗ್ರಸ್ಥವಾಗಿದ್ದ ಕಾಲ. ಶಾಲೆ ಕಾಲೇಜುಗಳಲ್ಲಿ ಮರಾ
ಠಿಯ ಕಲಿಕೆಗೆ ಮಾತ್ರ ಅವಕಾಶ. ಕನ್ನಡ ಕಲಿಸುವುದಕ್ಕೆಂದೇ ಬೆಳಗಾವಿಯಲ್ಲಿ
ಹೈಸ್ಕೂಲ್ ಪ್ರಾರಂಭ 1916 ರಲ್ಲಿ. "ಗಿಲಗಂಜಿ ಅರ್ಟಾಳ ಹೈಸ್ಕೂಲ್" ಎಂಬ
ಹೆಸರು. ಮಿತ್ರರೊಂದಿಗೆ ಸೇವಾಜೀವನದಾರಂಭ. ಅಭಿವೃದ್ಧಿ. ಉತ್ತಮ ಶಿಕ್ಷಕ
ರೆಂದು ಹೆಸರು ಧಾರವಾಡದಲ್ಲಿ ರಾಜಾ ಲಖಮನಗೌಡ ಸರದೇಸಾಯಿವರ ಹೆಸರಲ್ಲಿ
ಮತ್ತೊಂದು ಹೈಸ್ಕೂಲ್. ಅದರ ಪ್ರಿನ್ಸಿಪಾಲ್. 1922 ರಿಂದ 1933 ರವರೆಗೆ
ಅದರ ಬದುಕಿನಲ್ಲಿ ಸಂಪೂರ್ಣ ವಿಲೀನ. ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜ್
ಪ್ರಾರಂಭ. ಅದಕ್ಕಾಗಿ ಸರ್ ಕಂಬಳಿ ಸಿದ್ದಪ್ಪನವರ ಸಂಪೂರ್ಣ ಸಹಕಾರ. ಕಾಲೇ
ಜಿನ ಪ್ರಿನ್ಸಿಪಾಲರ ನೇಮಕದಲ್ಲಿ ಶಿಷ್ಯನಿಗೆ-ನಂದೀಮಠರಿಗೆ ಆಹ್ವಾನ. ದೊಡಮನಸ್ಸು.
ಶಿಷ್ಯನ ಮುಂದೆ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವಷ್ಟು ದೊಡ್ಡದು ಅದು. "ಶ್ರೀ
ಬಸವನಾಳರಂತಹ ಸರಳ ಸ್ವಭಾವದ ಪ್ರೇಮಮಯಿ ಮೂರ್ತಿಯು ದೊರೆಯುವುದು
ಅತಿ ದುರ್ಲಭ." -ಎಂದಿದ್ದಾರೆ ಡಾ|| ನಂದೀಮಠರು. ಅದು ಅವರ ಕೃತಜ್ಞತೆ.
ಭಟ್ಟೇಮನಿ ಮತ್ತು ಬಸವನಾಳರು ಒಂದು ನಾಣ್ಯದ ಎರಡು ಮುಖಗಳು. ಕೆ.ಎಲ್.
ಇ. ಸಂಸ್ಥೆಯ ಅಭಿವೃದ್ಧಿಯಲ್ಲಿ ಇವರದು ಅದ್ಭುತ ಸೇವೆ. 1949 ರಲ್ಲಿ ಕರ್ನಾಟಕ
ವಿಶ್ವವಿದ್ಯಾಲಯದ ಅಸ್ತಿತ್ವ ಅದರ ಹಿಂದೆ ಬಸವನಾಳರ ಉಸಿರಿದೆ. ಅಲ್ಲಿ ಸಿಂಡಿಕೇಟ್,
ಸೆನೆಟ್, ಅಕೆಡಮಿಕ್ ಕೌನ್ಸಿಲ್ ಸದಸ್ಯರಾಗಿ ನಿಷ್ಕಾಮ ಸೇವೆ ಸಲ್ಲಿಸಿದರು.

ಬಸವನಾಳರು ಉದ್ದಾಮ ಸಾಹಿತಿ. ಚೆನ್ನಬಸವಪುರಾಣ, ಪ್ರಭುಲಿಂಗಲೀಲೆ ಶಬರ ಶಂಕರ ವಿಳಾಸ, ಗಿರಿಜಾ ಕಲ್ಯಾಣಗಳನ್ನು ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ ಯಿಂದ ಪ್ರಕಟಿಸಿದ ಕೀರ್ತಿ ಅವರಿಗೆ. ವಚನಸಾಹಿತ್ಯವೆಂದರೆ ಬಸವನಾಳರಿಗೆ ಅತ್ಯಂತ ಪ್ರೀತಿ''. ''ಬಸವಣ್ಣನವರ ಷಟ್‌ಸ್ಥಲ ವಚನಗಳು'' –ಎಂಬ ಗ್ರಂಥದ ಪ್ರಕಟಣೆ. ಕೈವಲ್ಯ ದರ್ಪಣ, ಕೈವಲ್ಯ ಕಲ್ಪವಲ್ಲರಿಗಳ ಸಂಪಾದನೆ. ಹಾಗೆಯೇ ಮೈಲಾರ ಬಸವಲಿಂಗ ಶರಣರ ಕೃತಿಗಳ ಸಂಪಾದನೆಯೂ ಅವರದೇ. ಶಬ್ದಾನುಶಾಸನ, ಕಾವ್ಯಾವಲೋಕನಗಳ ಪ್ರಕಟಣೆ. ಅವರು ಶಬ್ದಾಗಮ ಪಂಡಿತರು, ಕನ್ನಡ ಸೇವಾ ಧುರೀಣರು. ಗ್ರಂಥಕರ್ತರೂ ಹೌದು. ಅವರು ಹಲಗಲಿ ಹಂಪಯ್ಯನವರೊಂದಿಗೆ ರಚಿಸಿದ್ದು 'ಇಂಗ್ಲಡದ ಅರ್ವಾಚೀನ ಇತಿಹಾಸ' ಮತ್ತು ಹಿಂದೂಸ್ಥಾನದ ಇತಿಹಾಸ ! ವಚನಗಳನ್ನು ಶ್ರೀನಿವಾಸ ಅಯ್ಯಂಗಾರ್‌ರೊಂದಿಗೆ ಇಂಗ್ಲಿಷಿಗೆ ಭಾಷಾಂತರಿಸಿದ್ದೂ ಉಂಟು. ವೀರಶೈವ - ಹಿಂದು - ಮುಂದು, ವೀರಶೈವದ ಹುಟ್ಟು ಬೆಳವಣಿಗೆ. ರವೀಂದ್ರನಾಥ ಠಾಕೂರರ ಲೇಖನಗಳು ಪಾಂಡಿತ್ಯಕ್ಕೆ ಹಿಡಿದ ಕನ್ನಡಿ.

ಜಯಕರ್ನಾಟಕ ಪತ್ರಿಕೆಯನ್ನು ನಡೆಸಿದ ಕೀರ್ತಿ ಬಸವನಾಳರದು. ಅವರ ಮತ್ತೊಂದು ಪತ್ರಿಕೆ 'ಸಾಹಿತ್ಯಸಮಿತಿ ಪತ್ರಿಕೆ' –ತ್ರೈಮಾಸಿಕ. ಕರ್ನಾಟಕ ವಿದ್ಯಾ ವರ್ಧಕ ಸಂಘದೊಡನೆ ಸಕ್ರಿಯ ಸಂಬಂಧ. ಸಿದ್ಧಗಂಗಾ ಕ್ಷೇತ್ರಕ್ಕೂ ಅವರಿಗೂ ಬಾಂಧವ್ಯ. ಅಲ್ಲಿ ನಡೆದ ತರುಣ ಸಮ್ಮೇಳನದ ಅಧ್ಯಕ್ಷತೆ. ವಿಚಾರ ಪೂರ್ಣಭಾಷಣ. 1945 ರಲ್ಲಿ ಕನ್ನಡಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ರಬಕವಿಯಲ್ಲಿ.

ಬಸವನಾಳರ ವ್ಯಕ್ತಿತ್ವ ಬಹುಮುಖವಾದುದು. "ಬಸವನಾಳರು ಒಂದು ವ್ಯಕ್ತಿಯಾಗಿರಲಿಲ್ಲ' ಮಹಂತರಾಗಿದ್ದರು. ಸಂಸಾರದ ಮಧ್ಯದಲ್ಲಿದ್ದೂ ಕೆಸರು ಸೋಂಕದ ಪಂಕಜದಂತಿದ್ದರು. ಅವರನ್ನು ಏನೆಂದು ವರ್ಣಿಸಬೇಕು ? ವಿದ್ವಾಂಸ ರೆಂದೇ, ಸಾಹಿತಿಗಳೆಂದೇ, ಸಂಘಟಕರೆಂದೇ, ಸಮಾಜನಿಷ್ಠರೆಂದೇ, ಧರ್ಮನಿಷ್ಠರೆಂದೇ ಕುಟುಂಬನಿಷ್ಠರೆಂದೇ, ಹಿರಿಯರೆಂದೇ, ಗೆಳೆಯರೆಂದೇ, ಸವಿಯನ್ನು ಹೊತ್ತುನಿಂತ ಮೂರ್ತಿಯೆಂದೇ, ಕಹಿಯನ್ನು ನುಂಗಿನಿಂತ ನಂಜುಂಡರೆಂದೇ, ಜೀವನದಲ್ಲಿ ಸಮನ್ವಯ ತತ್ವವನ್ನು ರೂಢಿಸಿಕೊಂಡವರೆಂದೇ, ಜೀವನದ ಆಳವಾದ ಅನುಭವ ಪಡೆದವ ರೆಂದೇ, ಶಿವಾನುಭಾವಿಗಳೆಂದೇ, ಪತ್ರಿಕಾಕರ್ತರೆಂದೇ, ಸಹಕಾರಿಗಳೆಂದೇ, ಸ್ಫೂರ್ತಿ ದಾಯಕರೆಂದೇ ?– ಏನೆಲ್ಲವೂ ಅವರಾಗಿದ್ದರು ಎನ್ನುತ್ತಾರೆ ಶ್ರೀ—

ಎಸ್. ಎಸ್. ಮಾಳವಾಡರು ಬಸವನಾಳರ ಜೀವನದ ಹರಹು ದೊಡ್ಡದು, ಶುಚಿಯಾದದ್ದು. ಬದುಕು 'ಪ್ರಸಾದ ಕಾಯ' ವೆಂಬ ಪವಿತ್ರ ಭಾವನೆ. ಜ್ಞಾನ-

ಸೆಪ್ಟಂಬರ್, 1984

ಕ್ರಿಯೆಗಳ ಸಮನ್ವಯ, ಅವರು ಸ್ವಭಾವದಲ್ಲಿ ನಿರಹಂಕಾರ, ಸಂಪರ್ಕದಲ್ಲಿ ಸರಳ, ಬಡವರ ವಿಷಯದಲ್ಲಿ ಕಾರುಣ್ಯ ಬುಗ್ಗೆ. "ಅಡಕವಾದ ಮೈಕಟ್ಟು, ನಸುಕೆಂಪಾದ ದೇಹಕಾಂತಿ, ಗಂಭೀರ ಮುಖಮುದ್ರೆ, ಹಿತಮಿತವೂ ವಿದ್ವಪೂರ್ಣವೂ ಆದಮಾತುಕತೆ ವಿನಯದಿಂದಲೂ ವಿವೇಕದಿಂದಲೂ ಕೂಡಿದ ಜೀವನ" "ಕನ್ನಡನುಡಿ" ಕಂಡ ಬಸವನಾಳರ ಚಿತ್ರ ಇದು ಮೈಮೇಲಿನ ಉದ್ದ ಕೋಟು, ತಲೆಯ ಮೇಲಿನ ಬಿಳಿಯ ರುಮಾಲು, ಉಟ್ಟ ಅಚ್ಚ ಬಿಳಿಯ ದೋತರದ ದೈವಭಕ್ತಿಯ, ಸಾದಾ ಜೀವನದ, ಶಾಂತಭಾವದ, ಕನ್ನಡ ದೇವಿಯ ಮಹಾಭಕ್ತ ಬಸವನಾಳ. ದಿನಾಂಕ 22-12-1951 ರಂದು ಲಿಂಗವಾಗಿ ಹೋದರು. ಬೆಳಕಾಗಿ ಉಳಿದರು.

---

ದುಷ್ಟ ಪ್ರವೃತ್ತಿಗಳನ್ನು ದಮನ ಮಾಡಿದ ಹೊರತೂ ಧರ್ಮಕ್ಕೂ, ಲೋಕ ಹಿತಕ್ಕೂ ಉಳಿಗಾಲವಿಲ್ಲ.

—ವಿ. ಸೀತಾರಾಮಯ್ಯ (ಆಗ್ರಹ ಪು. 8)

---

## 'ಸಿದ್ಧಗಂಗಾ' ಸೇವೆಗೆ ಮತ್ತೊಂದು ಹೆಸರು

ಅದು ನಿಮ್ಮ ಸಹಕಾರದ ಪ್ರತಿರೂಪ. ಅದರ ಯಶಸ್ಸು ನಿಮ್ಮದು;

'ಸಿದ್ಧಗಂಗಾ' ಮಾಸಿಕಕ್ಕೆ ತಾವೂ ಆಜೀವ ಸದಸ್ಯರಾಗಬಹುದು;

ಆ ಪುಣ್ಯ ನಿಮ್ಮದಾಗಲಿ. ಇದು ನಮ್ಮ ನಮ್ರ ವಿನಂತಿ.

**ನೀವು ಮಾಡಬೇಕಾದುದಿಷ್ಟೆ**

ಕೇವಲ ಎರಡುನೂರಒಂದು ರೂ.ಗಳನ್ನು ನೀಡಿದರೆ ಸಾಕು. ಪ್ರತಿ ತಿಂಗಳೂ

"ಸಿದ್ಧಗಂಗಾ" ನಿಮ್ಮ ಮನೆಯ ಬಾಗಿಲಿಗೆ ಧಾವಿಸುತ್ತದೆ.

ನಿಮ್ಮ ಮನದ ಭಾವನೆಗಳಿಗೆ, ಆಲೋಚನೆಗಳಿಗೆ, ರೂಪ ಕೊಡಲು

ಸಿದ್ಧಗಂಗಾ ಸಿದ್ಧವಾಗಿದೆ. ಸಹಕರಿಸಿ, ಮುನ್ನಡೆಸಿ, ಇದು ನಿವೇದನೆ.

# ಗ್ರಾಮಾಂತರ ಬಸವಜಯಂತಿ

—ಹೆಚ್. ವಿ. ವೀರಭದ್ರಯ್ಯ

ಹರಳೂರು ಶ್ರೀ ವೀರಭದ್ರದೇವರ ಕ್ಷೇತ್ರ. ಗೌತಮ ಋಷಿಗಳು ಸಂಚರಿಸಿದ ತಪೋಭೂಮಿ, ವೀರಶೈವ ಸಂಸ್ಕೃತಿ ಮಲ್ಲಿಗೆಯಾಗಿ ಅರಳಿದ ಭಕ್ತಿಯ ಬೀಡು. ಅಲ್ಲಿ ಬಸವ ಜಯಂತಿ ಆಚರಿಸಬೇಕೆಂಬ ಹಂಬಲ, ತುಡಿತ ಗ್ರಾಮೀಣ ಬಂಧುಗಳಿಗೆ. ವೀರಭದ್ರದೇವರ ಜಾತ್ರಾ ಸಂದರ್ಭ. ಆಗಲೇ ಬಸವಜಯಂತಿಯ ಆಚರಣೆಗೆ ಕಾಲ ಕೂಡಿ ಬಂತು. ವ್ಯವಸ್ಥಾಪಕಗ, ಸಂಚಾಲಕರ ಆಸೆ ಕೈಗೂಡಿತು. ಮುಂದಾಳುಗಳಾಗಿ ಶ್ರೀ ಕೆ. ಎಸ್. ಶಂಕರಯ್ಯ ಮತ್ತವರ ಮಿತ್ರರು. ನಡೆಸಿಕೊಡಬೇಕೆಂಬ ಭಕ್ತಿಯ ಬಿನ್ನಹ ಶ್ರೀ ಶ್ರೀಗಳವರಲ್ಲಿ. ಸ್ವಾಮೀಜಿ ಅನುಗ್ರಹಿಸಿದರು. ಆಚರಣೆ 20-4-1984 ಶುಕ್ರವಾರದಂದು. ಹರಳೂರು ತನ್ನನ್ನರ್ಪಿಸಿಕೊಂಡಿತು -ಬಸವ ತತ್ವಗಳಿಗೆ.

ಪರಮಪೂಜ್ಯ ಶ್ರೀ ಶ್ರೀಗಳವರಿಗೆ ತುಂಬುಶ್ರದ್ಧಾಭಕ್ತಿಯ ಸ್ವಾಗತ. ಉತ್ಸಾಹದ ತುಂಗಾ ಪ್ರವಾಹ. ನಂದಿಧ್ವಜ ಕರಡಿ ಮಜಲುಗಳಿಗೆ ಹರಳೂರು ಪ್ರಸಿದ್ಧ. ಅವುಗಳ ಸುಂದರ ದೃಶ್ಯ ಕಣ್ತುಂಬಿತು. ಪೂರ್ಣಕುಂಬಗಳ ಸಾಲು ಮೆರವಣಿಗೆ. ಮಂಗಳ ಕಳಶ; ಕನ್ನಡಿಯ ಸೊಗಸು. ಶ್ರೀ ವೀರಭದ್ರದೇವರ ಸನ್ನಿಧಿ. ವೇದಿಕೆ ತುಂಬಾ ಎತ್ತರ. ಶ್ರೋತೃಗಳಿಗೆ ತುಸು ದೂರ. ಆದರೂ ಕೇಳುವ ಕಿವಿಗಳಿಗೆ ಎಲ್ಲ ಹತ್ತಿರ. ಎಲ್ಲ ಹತ್ತಿರ, ಪ್ರಾರ್ಥನೆ, ಸ್ವಾಗತ ಎಲ್ಲ ವಿದ್ಯುಕ್ತ, ವ್ಯವಸ್ಥಿತ.

ಅಖಂಡ ಭರತಖಂಡಕ್ಕೆ ಕನ್ನಡದ ವಿಶಿಷ್ಟ ಕೊಡುಗೆ ಬಸವಣ್ಣ. ಧರ್ಮದೀಪಕರ ಶ್ರೇಣಿಯ ಗೌರೀಶಂಕರ ಅಣ್ಣ. ಕನ್ನಡ ನಾಡಿನ ಪ್ಲೇಟೋ ಬಸವಣ್ಣ. ಮಹಾರಾಷ್ಟ್ರದ ತುಕಾರಾಮರಲ್ಲಿ ಬಸವಣ್ಣನವರ ತತ್ವಗಳಿವೆ. ರಾಮದಾಸರಲ್ಲಿ ಚೆನ್ನಬಸವಣ್ಣನವರ ಚಿಂತನ ಹೆಪ್ಪುಗಟ್ಟಿದೆ. ಬಸವಣ್ಣನ ಮೂಲಕ ಮಾತನಾಡಿದ ಕೂಡಲಸಂಗಮದೇವ. Good sleeps in the earth, lives in plants, moves in animals and speaks through man ಎನ್ನುತ್ತ ಶ್ರೀ ಬಿ. ವೀರಭದ್ರಯ್ಯನವರು ಬಸವಣ್ಣನವರ ಮೂಲಕ ಕೂಡಲ ಸಂಗಮ ಮಾತನಾಡಿದ ರೀತಿಯ ವಿವಿಧ ಅನುಭವಗಳ ಪರಿಚಯ ಮಾಡಿಕೊಟ್ಟರಲ್ಲದೆ, ಬಸವಣ್ಣನ ಬಳಿಗೆ ಬಂದವರು ಕಾಮನನ್ನೂ ಗೆಲಿದರು, ಕಾಯಕವನ್ನೂ ಕಲಿತರು,

ದಾಸೋಹವನ್ನು ಕಲಿತರು. ಅದರ ಜ್ವಲಂತ ಉದಾಹರಣೆ ಪರಮಪೂಜ್ಯ ಶ್ರೀ ಶ್ರೀಗಳವರೆಂದು ನುಡಿದರು.

ಜೋಗದ ಜಲಪಾತ ಸಿದ್ಧಗಂಗಾ ಶ್ರೀ ಶ್ರೀಗಳು. ಜ್ಞಾನ ಹರಿದು ಲೋಕಕ್ಕೆ ಬೆಳಕು ನೀಡುವ ಅದ್ಭುತ ಚೈತನ್ಯ. ಅವರಿಗೆ ಹಗಲಿಲ್ಲ, ಇರುಳಿಲ್ಲ, ಬಸವತತ್ವ ಪ್ರಸಾರ ಕೈಂಕರ್ಯದಲ್ಲಿ. "ಬಸವ ನಿಘಂಟು" ಶ್ರೀ ಶ್ರೀಗಳಾಗಿದ್ದಾರೆ ಇಂದು. ಆ ನಿಘಂಟು ಜೀವಂತ, ಮಿಗಿಲಾಗಿ ಜಂಗಮ ಶಾಸನ. ನಮ್ಮಲ್ಲಿರುವ ಜ್ಞಾನವನ್ನು ಇಂದು ಮುಚ್ಚಿಹೋಗಿದೆ. ಅದು ಥಳಥಳಿಸಬೇಕು. ಮುಚ್ಚಿಕೊಂಡಿರುವ ರಾಗಭಾವಗಳು ಹಿಂದೆ ಸರಿಯಬೇಕು.

ಜ್ಞಾನಿಗಳು ಚಿಂತಿಸುವುದು ಹೊಟ್ಟೆಯ ಹಸಿವಿಗಾಗಿಯಲ್ಲ, ನೆತ್ತಿಯ ಹಸಿವಿಗಾಗಿ, ಆತ್ಮತೃಪ್ತಿಗಾಗಿ. ಲೋಕ ಹಿತಕ್ಕಾಗಿ. ದೇಶದ ನಾಯಕರು ದೇಶದ ಜನತೆಯನ್ನು ಅರ್ಥ ಮಾಡಿಕೊಳ್ಳಬೇಕು. ಜನರಿಗೆ ದುಡ್ಡು ಕೊಟ್ಟರೆ ಬಡತನ ಬಯಲಾಗುವುದಿಲ್ಲ. ಅವರ ತಲೆಗೆ ವಿಚಾರದ ಕಡ್ಡಿ ಗೀರಬೇಕು. ಶರೀರದೊಳಗಿರುವ ಸಂಪತ್ತಿನ ಅರಿವಿನ ಪರಿಚಯ ಮಾಡಿಸಬೇಕು. ಮಣ್ಣಿಗೆ ಹೋಗುವ ಮುನ್ನ 'ತನ್ನತಾನರಿಯ' ಬೇಕು. ಬಸವಣ್ಣನವರ ಬದುಕು ಇದಕ್ಕೊಂದು ಜೀವಂತ ಪ್ರಯೋಗ ಶಾಲೆ. ಅದರ ವ್ಯಕ್ತರೂಪ ಶ್ರೀ ಶ್ರೀಗಳವರು, 'ಶರಣರಚಮ್ಮಾವಿಗೆಗೆ ಭೂಮಿ ಸರಿ ಬಾರದು ನೋಡಾ'–ಎನ್ನುತ್ತ ರಾಣಿ ಬೆನ್ನೂರಿನ ಶ್ರೀ ವಿ.ವಿ. ಸಂಗಮದ ಅವರು ಸಿದ್ಧಗಂಗಾ ಗುರುಗಳ ಕಾಯಕ ಜೀವನ, ದಾಸೋಹಸಿದ್ಧಿ, ಬಸವತತ್ವಾನುಷ್ಠಾನ ನಿಷ್ಠೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದರು.

ದ್ವಿತೀಯ ಅಧಿವೇಶನ. ಮಧ್ಯಾಹ್ನ 4 ಘಂಟೆ. ಸಭೆಯಲ್ಲಿ ಶಾಸಕ ಶ್ರೀ ವೈ. ಕೆ. ರಾಮಯ್ಯನವರು ತುಮಕೂರು ಕ್ಷೇತ್ರದ ಶಾಸಕ ಶ್ರೀ ಲಕ್ಷ್ಮೀನರಸಿಂಹಯ್ಯನವರು ಉಪಸ್ಥಿತರು. ಜಯಂತಿಯ ಕಾರ್ಯಕ್ರಮಗಳಲ್ಲಿ ಭಾಗಿಯಾಗುವ ಪುಣ್ಯ ತಮ್ಮದಾದುದಕ್ಕೆ ಸಂತೋಷದ ನುಡಿಗಳು ಶಾಸಕರುಗಳಿಂದ. ಬಸವಣ್ಣನವರ ವಚನಗಳ ಅಭ್ಯಾಸದ ಅಗತ್ಯ ಇದೆ ಎಂಬ ಇಬ್ಬರೂ ಹೇಳಿದ ಮಾತುಗಳು ಮನನೀಯ.

ಸಮಾಜ ಇಂದು ನಿರ್ವೀರ್ಯವಾಗಿದೆ. ನೈತಿಕತೆ ನಾಶವಾಗುತ್ತಿದೆ, ವ್ಯಕ್ತಿ ಸಮಾಜದ ಮೂಲ ಘಟಕ. ಆಚಾರವಿಚಾರಗಳ ಸಂಗಮ-ಸಂಸ್ಕೃತಿ. ಪುರಾಣ ವಿರೋಧಿಗಳಾದ ವೀರಶೈವರು ನಡೆ-ನುಡಿಗಳನ್ನು ಬೆಸೆದ ಸಂಸ್ಕೃತಿ ನಿರ್ಮಾಪಕರು. ಅಂಗಳಿದರೂ ಲಿಂಗವುಳಿಯ ಬೇಕೆಂದು ಬಾಳಿದರು.

ಅನುಭವದ ಆಧಾರದ ಮೇಲೆ ಜೀವನಸೌಧ ರಚಿಸಿದ ಶಿಲ್ಪಿಗಳು. ಅವರಲ್ಲಿ

ಪ್ರಾಮಾಣಿಕತೆಯಿತ್ತು. ಅನಾಚಾರಕ್ಕೆ ಅವರ ವಿರೋಧವಿತ್ತೆಂದು ವಚನಕಾರರ ಮತ್ತು ಸಮಾಜದ ಪರಿಚಯ ನೀಡಿದರು ಪ್ರಾಧ್ಯಾಪಕ ಶ್ರೀ ಕೆ. ಜಿ. ನಾಗರಾಜಪ್ಪ ನವರು.

ಬಸವಣ್ಣ ದೇವರಲ್ಲ; ದೇವರೆಂದು ಭಾವಿಸಿದರೆ ತಪ್ಪಲ್ಲ. 800 ವರ್ಷಗಳ ಹಿಂದೆ ಬಾಳಿ ಬೆಳಗಿದ ಒಬ್ಬ ಮಹಾ ವ್ಯಕ್ತಿ. ಜನತ್ತಿಗೇ ಬೇಕಾದ ಮಹಾನುಭಾವ. ಇಲ್ಲಿಯವರೇ ಬಸವಣ್ಣ. ಉದ್ದಕ್ಕೂ ತಮ್ಮನ್ನು ತಿದ್ದಿಕೊಂಡೇ ಜೀವಿಸಿದರು. ಸಂಪ್ರದಾಯವನ್ನು ಪ್ರದರ್ಶಿಸುವ ಎದೆಗಾರಿಕೆಯನ್ನು ತೋರಿಸಿದರು ಬಸವಣ್ಣ. ಅವೈಚಾರಿಕ ಮೂಢನಂಬಿಕೆಗಳ ಎದುರು ನಿಂತರು; ಪ್ರವಹಿಸಿದರು. ವೇದಗಳನ್ನೂ ಪುರಾಣಗಳನ್ನೂ, ಶಾಸ್ತ್ರಗಳನ್ನೂ ನಿರಾಕರಿಸಿದರು. ಆತ್ಮ ತತ್ವವನ್ನು ಮೂಲವಾ ಗಿಟ್ಟುಕೊಂಡು ಮಹಿಳೆಯರನ್ನು ಉದ್ಧರಿಸಿದರು. ಸಾಮಾನ್ಯ ಜನರ ಬದುಕನ್ನು ಕೆಚ್ಚು ಕ್ರಿಯಾಶೀಲವನ್ನಾಗಿಸಿದ ಕೀರ್ತಿ ಅವರದು. ಕನ್ನಡಕ್ಕೆ ಮರ್ಯಾದೆ ತಂದು ಕೊಟ್ಟ ಅಭಿಮಾನಿ. ಜೀವನವನ್ನು ಮಾಯೆಯೆಂದು ಎಂದೂ ಹೇಳಲಿಲ್ಲ. ಜೀವನ ಒಂದು "ಕೊಟ್ಟ ಕುದುರೆ" ಅದನ್ನು ಸವಾರಿಸುವ ಕಲೆ ನಮ್ಮದಾಗಬೇಕು. ಬಸವಣ್ಣ ನವರ ದೃಷ್ಟಿಯಲ್ಲಿ ದೇವರು ಗಂಗಾಧರ ಅಲ್ಲ; ಚಂದ್ರಚೂಡ ಅಲ್ಲ; ಸರ್ಪಭೂಷಣ ಅಲ್ಲ. ಅದು ಲಿಂಗ. ಸುಲಿಗೆಗಳ ಕೇಂದ್ರಗಳಾದ ದೇವಸ್ಥಾನಗಳ ಬಗ್ಗೆ ಬಸವಣ್ಣ ನಿಗೆ ಪ್ರೀತಿಯಿರಲಿಲ್ಲ. ಹಾಗೆಯೇ ಅನೇಕ ದೇವರುಗಳ ಕಲ್ಪನೆಯೂ ಆ ಮಹಾ ಹೃದಯಕ್ಕೆ ಅಸಂಗತ, ಸಕಲರ ಶ್ರೇಯಸ್ಸನ್ನು ಕೋರುವ ಕುಲವೇ ಶ್ರೇಷ್ಠ. ಅದು ಬಸವಣ್ಣನ ಕುಲ-ಎಂಬುದಾಗಿ ಉಪನ್ಯಾಸ ನೀಡಿದರು ಬೆಂಗಳೂರು ವಿಶ್ವವಿದ್ಯಾನಿಲ ಯದ ಕನ್ನಡ ಪ್ರಾಧ್ಯಾಪಕರಾದ ಡಾ|| ಜಿ.ಎಸ್. ಶಿವರುದ್ರಪ್ಪನವರು.

ಪಂಡಿತರು ಕಂಡ ಬಸವಣ್ಣ ಒಂದು ತೆರ, ಸಮಾಜ ಸುಧಾರಕರು ಕಂಡ ಬಸ ವಣ್ಣ ಒಂದು ತೆರ, ಮಠಾಧಿಪತಿಗಳು, ಸ್ವಾಮಿಗಳು, ಗುರುಗಳು ಕಂಡ ಬಸವಣ್ಣ ಒಂದು ತೆರ, ಜನಪದದ ಗರತಿಯರು ಕಂಡ ಬಸವಣ್ಣನೇ ಒಂದು ತೆರ, ಗರತಿಯರು ಕಂಡ ಬಸವಣ್ಣ ಅಭಿಮಾನದ ಅಮೃತ ಬಂಧು, ಅಂತರಂಗದಲ್ಲಿ ನೆಲೆನಿಂತ ರಕ್ತ ಬಂಧು, ಆತ್ಮೀಯ ಅಣ್ಣ ಬಸವಣ್ಣನೆಂಬುದು ಶ್ರೀ ಹೆಚ್.ವಿ. ವೀರಭದ್ರಯ್ಯನವರು.

ಎರಡೂ ಅಧಿವೇಶನಗಳ ಅಧ್ಯಕ್ಷತೆ ಪೂಜ್ಯ ಶ್ರೀ ಶ್ರೀಗಳವರಿಗೇ ಮೀಸಲು, ಆಶೀರ್ವಚನ ನೀಡುತ್ತ ಹೀಗೆಂದರು ಸಭೆಯನ್ನು ಗಮನಿಸುತ್ತ "ಜೊಳ್ಳು ಮಾತೆಂದರೆ ನಲಿನಲಿದಾಡುವರು". ಲಿಂಗಾರ್ಚನೆಯೆಂದರೆ ಸಮಯವಿಲ್ಲವೆನ್ನುವರು. ಜೀವನದಲ್ಲಿ ಕಾಲಕ್ಕೆ ತುಂಬ ಬೆಲೆಯಿದೆ. ಹಿರಿಯರು ಕೇಳುತ್ತಲೇ ಕಲಿತು ಜ್ಞಾನಿಗಳಾದರು, ಶರಣರೆನಿಸಿದರು. ಜನ್ಮ ಕೊಟ್ಟ ತಾಯಿಯಿಂದ ನನಗೆ ಸಂಸ್ಕಾರ ವಿಶೇಷ ಉಂಟಾಯಿತು. ಬಸವಣ್ಣನವರ ಜೀವನದಿಂದ ನಾವು ಕಲಿಯಬೇಕಾದ್ದು ಅಗಾಧ

ಅದಕ್ಕಾಗಿ ಬಸವ ಜಯಂತಿಯು ಆಚರಣೆ ಭರವಸೆ, ಆಸಕ್ತಿ, ಕ್ರಿಯಶೀಲತೆಗಳನ ಬಸವಣ್ಣ ಜನತೆಯಲ್ಲಿ ಉಂಟುಮಾಡಿದರು. ಅನುಪಮ ವ್ಯಕ್ತಿತ್ವ ಅಣ್ಣನದು ಎಲ್ಲರ ಅತ್ತ ಗಮನಕೊಟ್ಟರೆ ಸಮಾಜ, ನಾಡು, ಜಗತ್ತು ಮಂಗಳ ದೃಶ್ಯವನ್ನು ಕಾ ಬಹುದು. ವ್ಯವಸ್ಥೆಯನ್ನು ಮೆಚ್ಚಿ ನುಡಿದರು, ಕಾರ್ಯಕರ್ತರನ್ನು ಪ್ರೋತ್ಸಾಹ ನುಡಿಗಳಿಂದ ಆಶೀರ್ವದಿಸಿದರು.

ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನ, ರಾತ್ರಿ ಹತ್ತು ಘಂಟೆಯಿಂ ಬೆಳಗ್ಗೆ ಆರು ಘಂಟೆಯ ತನಕ ಸಾಗಿತು ಜನಜಾತ್ರೆ ಕಣ್ಣಿಗೆ ಹಬ್ಬ. ವಿಶೇಷ ಕಾ ಕ್ರಮ, ನಾಟಕದ ಸಂಪೂರ್ಣ 'ವಿಡಿಯೋಕರಣ', ಬಂಧು ಶ್ರೀ ಪುಟ್ಟಪ್ಪನವರಿಂದ ಶಾಶ್ವತ ದಾಖಲೆಗೊಂದು ಮೈಲಿಗಲ್ಲು. ನಾಟಕ ಮುಗಿದಾಗ ಶ್ರೀ ರುದ್ರದೇವ ಗುಡಿಯಲ್ಲಿ ಬೆಳಗಿನ ಮಂಗಳ ಧ್ವನಿ ಕೇಳಿಬರುತ್ತಿತ್ತು, ಭಕ್ತಸಮೂಹ ನಾಲ್ಕು ದಿಕ್ಕಿ ನಲ್ಲಿ ಸಾಗಿತ್ತು.

"ಸ್ವಾಮಿಗಳಿದಕ್ಕೆಲ್ಲ ಎಷ್ಟು ಶ್ರಮ ಪಡುತ್ತಾರಪ್ಪ" ದೇವಾಲಯದ ಮೆಟ್ಟಲೇರು ತ್ತಿದ್ದಾತ ಕೇಳುತ್ತಿದ್ದ. "ಅವರ ಶ್ರಮಾನ ನಾವರ್ಥ ಮಾಡ್ಕೊಳ್ಳಬೇಕಲ್ವ" ಹಣ್ಣು ಹಣ್ಣು ಮುದುಕಿ ಹೇಳುತ್ತಿದ್ದಳು. 'ಹೌದ್‌ಕಣವ್ವ' ಆತನೆಂದ ನಾವೂ ನಮ್ಮೂ ರಾಗೆ ನಾಟಕ ಆಡಿಸ್ಬೇಕು, ಏನಂತೀಯ ಪಕ್ಕದಲ್ಲೇ ಬರುತ್ತಿದ್ದ ಇನ್ನೊಬ್ಬನಿಗೆ ಹೇಳು ತ್ತಿದ್ದ. "ಅಗೋ ಸ್ವಾಮಿಗಳ ಕಾರು ಹೋಗ್ತಾ ಇದೆ ನೋಡು, ಕೈಮುಗಿ ನಮ್ಮಪ್ಪನಿಗೆ".

## ಆತ್ಮ ಎಂದರೇನು ?

ಆತ್ಮವೆಂದರೆ ಮನುಷ್ಯನ ಬದುಕಿನ ಎಲ್ಲ ಹಂತಗಳನ್ನು ದೇಹದ, ಮನಸ್ಸಿನ, ಬುದ್ಧಿಯ, ಸುಪ್ತ ಪ್ರಜ್ಞೆಯ, ಆಧ್ಯಾತ್ಮಿಕದ ಎಲ್ಲ ಅಂಗಗಳನ್ನು ಸೂತ್ರಬದ್ಧವಾಗಿ ಹಿಡಿದಿಡಬಲ್ಲ ಅಂತರ್ಗತ ಕೇಂದ್ರ ಶಕ್ತಿ.

—ಎಂ. ಗೋಪಾಲಕೃಷ್ಣ ಅಡಿಗ

# ವಿವಿಧ ಸಮಾರಂಭಗಳಲ್ಲಿ ಶ್ರೀಶ್ರೀಗಳು

—ಸಂಪಾದಕರು

ತಾ॥ 16–7–84ರಂದು ಶಿರಾದ ರೋಟರಿ ಕ್ಲಬ್ ಆಶ್ರಯದಲ್ಲಿ ಉಚಿತ ನೇತ್ರ ಚಿಕಿತ್ಸಾ ಶಿಬಿರ ಉದ್ಘಾಟನೆ ಮಾಡುತ್ತಾ ಶ್ರೀಶ್ರೀಗಳು ರೋಟರಿ ಸಂಸ್ಥೆ ಇದು ಅಂತರ ರಾಷ್ಟ್ರೀಯ ಸಂಸ್ಥೆ. ಈ ಸಂಸ್ಥೆಯ ಕಾರ್ಯವ್ಯಾಪ್ತಿ ಹಲವುಬಗೆಯಾಗಿದೆ. ಅನೇಕ ಪುಣ್ಯಕಾರ್ಯಗಳನ್ನು ಹಮ್ಮಿಕೊಂಡು ಜನತಾಸೇವೆಯಲ್ಲಿ ಇಂದು ತೊಡಗಿದೆ. 'ಎಲ್ಲ ಇಂದ್ರಿಯಗಳಿಗೂ ಪ್ರಧಾನವಾದ ಇಂದ್ರಿಯ ನೇತ್ರೇಂದ್ರಿಯ' ಕಣ್ಣಿಲ್ಲದ ವ್ಯಕ್ತಿ ಕುಟುಂಬಕ್ಕೆ ಆರ್ಥಿಕವಾಗಿ ಹೊರೆಯಾಗುತ್ತಾನೆ ಈ ಹೊರೆ ತಪ್ಪಿಸಿ ಸಮಾಜಕ್ಕೆ ಮಾಡುವ ರೋಟರಿಯವರ ಉಪಕಾರ ಮಹತ್ತರವಾದುದ್ದು. ನೇತ್ರದಾನದಿಂದ ವ್ಯಕ್ತಿಯ ಬದುಕು ತೃಪ್ತಿಕರವಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಅನೇಕ ಬಡಕುಟುಂಬಗಳಿಗೆ ಅರ್ಥಿಕವಾಗಿ ನೆರವಾದ ರೋಟರಿ ಸಂಸ್ಥೆಯವರ ಸೇವೆ ಅಭಿನಂದನೀಯವಾದದ್ದು. ಈ ಚಿಕಿತ್ಸೆಗಾಗಿ ಬಂದು ಇಲ್ಲಿ ಕುಳಿತಿರುವವರನ್ನು ನೋಡಿದರೆ ಬಡತನವೇ ಮೈವೆತ್ತಿ ಕುಳಿತಿರುವಂತಿದೆ. ನಮ್ಮಲ್ಲಿ ಯೋಜನೆಗಳು ಹಲವಾರು ಬಂದು ಹೋದವು. ಇಷ್ಟಾದರೂ ನಮ್ಮ ಜನರ ಬಡತನ ನಿವಾರಣೆಯಾಗಲಿಲ್ಲ. ಜನತೆಯ ಜೀವನವಂತೂ ಚಿಂತಾಜನಕವಾಗಿದೆ. ಜನರ ಕಲ್ಯಾಣವಂತೂ ಕನಸಾಗಿ ಉಳಿದಿದೆ.

ಒಂದು ಒಳ್ಳೆಯ ಕಾರ್ಯಮಾಡುವವರನ್ನು ಕಂಡು ಟೀಕೆ ಮಾಡುವ ಜನರೇ ನಮ್ಮಲ್ಲಿ ಅಧಿಕವಾಗಿದ್ದಾರೆ. ಇದು ನಮ್ಮ ದೇಶಕ್ಕೆ ಅಂಟಿರುವ ಜಾಡ್ಯ. ಕಾರ್ಯ ಪ್ರವೃತ್ತವಾದಾಗ ತತ್ವಗಳು ಅನಿವಾರ್ಯವಾಗುತ್ತವೆ. ಆಗ ಸಹನೆ ತಾಳ್ಮೆ ಅಗತ್ಯ. ಸೇವಾಭಾವನೆಯಿಂದ ಕಾರ್ಯವೆಸಗುವ ಈ ಸಂಸ್ಥೆಯ ಕಾರ್ಯ ಇದೇರೀತಿ ಮುಂದುವರಿಯಲಿ ನಮ್ಮ ನಾಡಿನ ಬಡಕುಟುಂಬಗಳಿಗೆ ಆಸರೆಯಾಗಲಿ ಎಂದು ಹಾರೈಸಿ, ಇಂದಿನ ಈ ಶಿಬಿರ ಯಶಸ್ವಿಯಾಗಿ ಕಾರ್ಯ ನಿರ್ವಹಿಸಲೆಂದು ಆಶಿಸುತ್ತೇವೆ.

ತಾ॥ 25–7–84 ರಂದು ತುಮಕೂರಿನಲ್ಲಿ ಬಾಪೂಜಿ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ಪ್ರಾರಂಭಿಸಿದ 'ಬಾಪೂಜಿ ಕಿರಿಯ ಕಾಲೇಜಿನ' ಉದ್ಘಾಟನಾ ಸಮಾರಂಭವನ್ನು ಆಶೀರ್ವದಿಸುತ್ತಾ, 'ನಮ್ಮದು ಪ್ರಜಾಪ್ರಭುತ್ವಯುಗ, ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಯೋಗ್ಯ ಶಿಕ್ಷಣದ ಅವಶ್ಯಕತೆಯಿದೆ. ಸಮಾಜ ಉತ್ತಮಗೊಂಡರೆ ರಾಜಕೀಯರಂಗವೂ ಉತ್ತಮಗೊಳ್ಳುತ್ತದೆ "ರಾಜಕೀಯರಂಗ ಅಥವಾ ಸರಕಾರ ಸಮಾಜದಪ್ರತಿಬಿಂಬ" ಸಮಾಜವು ಉತ್ತಮ ನಾಯಕನ ಆಯ್ಕೆಯ ಹೊಣೆ ಹೊರಬೇಕಾಗುತ್ತದೆ. ವಿವೇಕಯುತವಾದ ತೀರ್ಮಾನವನ್ನು ಸಮಾಜ

ತೆಗೆದುಕೊಂಡು ಯೋಗ್ಯರನ್ನು ಚುನಾಯಿಸಬೇಕಾಗುತ್ತದೆ ಈ ದಿಸೆಯಲ್ಲಿ ಶಿಕ್ಷಣ ಪಾತ್ರ ಹಿರಿದು. ಇಂದು ಕೆಲವು ಶಿಕ್ಷಣ ಸಂಸ್ಥೆಗಳು ವ್ಯಾಪಾರೀಮಳಿಗೆಗಳಾಗಿವೆ ಅವು ಜ್ಞಾನ ಜ್ಯೋತಿಯ ಪವಿತ್ರ ಮಂದಿರಗಳಾಗಬೇಕು. ಜಗತ್ತಿನಲ್ಲಿ ಹೆಣ್ಣು ಹೊನ್ನು ಮಣ್ಣು ಶಾಶ್ವತವಲ್ಲ. ಐಶ್ವರ್ಯ ಸ್ಥಿರವಲ್ಲ. ನಮ್ಮ ಅಮೂಲ್ಯವಾದ ಸಂಪತ್ತು "ಜ್ಞಾನರತ್ನ" ಅಲ್ಲಮಪ್ರಭುಗಳು ಅಪ್ಪಣೆ ಕೊಡಿಸಿರುವಂತೆ, "ನಿನ್ನೊಡವೆಯೆಂಬುದು ಜ್ಞಾನ ರತ್ನ ಅದನ್ನು ಕೆಡಗೊಡದೆ ಅಲಂಕರಿಸಿದೆಯಾದೊಡೆ ನಿನ್ನಿಂದ ಬಿಟ್ಟು ಸಿರಿವಂತರಿಲ್ಲ" ಎಂಬಂತೆ ಮಕ್ಕಳು ಎಂದೂ ನಾಶವಾಗದ ಆ ಚಂದ್ರಕಣಸ್ಥಾಯಿಯಾಣ ಜ್ಞಾನ ರತ್ನದ ಸಂಪಾದನೆಯಲ್ಲಿ ಶ್ರದ್ಧೆ ನಿಷ್ಠೆಯುಳ್ಳವರಾಗಬೇಕು. ಕಾಲದಪ ವ್ಯಯ ಸಲ್ಲದು. ಇಂದಿನ ದಿನ ನಾಳೆ ಬಾರದು. ಆದ್ದರಿಂದ ಅಂದಂದಿನ ಕೆಲಸವನ್ನು ಅಂದು ಮಾಡಿಮುಗಿಸಬೇಕು. ಸಮಯ ಪರಿಪಾಲನೆ ಜೀವನವನ್ನು ವ್ಯವಸ್ಥಿತವಾಗಿ ರೂಪಿಸುತ್ತದೆ. ಕರ್ತವ್ಯಶೀಲರನ್ನಾಗಿ ಮಾಡುತ್ತದೆ ಆದ್ದರಿಂದ ವಿದ್ಯಾರ್ಥಿಗಳಲ್ಲಿ ಕಾಲದ ಸದುಪಯೋಗ ಒಂದು ಶೀಲವಾಗಿ ಪರಿಣಮಿಸಬೇಕು. ಈ ಸಂಸ್ಥೆಗೆ ರಾಷ್ಟ್ರಪಿತನ ಹೆಸರನ್ನಿಟ್ಟಿದೆ. ಆತನ ನಾಮ ಸ್ಮರಣೆ ನಮಗೆ ಚಿರನೂತನ. ಆ ಮಹಾತ್ಮರ ಜೀವನದ ದಿವ್ಯಾದರ್ಶಗಳನ್ನು ಅರ್ಥಮಾಡಿಕೊಳ್ಳಿ, ಜೀವನದಲ್ಲಿ ಆಚರಣೆ ಮಾಡುವ ಅಭ್ಯಾಸವನ್ನು ದಿನೇ ದಿನೇ ಬೆಳಸಿಕೊಳ್ಳಿ ಸಂಸ್ಥೆಯ ಆಸ್ತಿಯಾದ ನೀವು ಸಂಸ್ಥೆಯ ಕೀರ್ತಿಗೆ ಶ್ರಮಿಸಿ ಕಷ್ಟಪಟ್ಟು ಅಭ್ಯಾಸಮಾಡಿರಿ, ಎಲ್ಲರಿಗೂ ಪರಮಾತ್ಮ ಮಂಗಳವನ್ನುಂಟುಮಾಡಲಿ ಎಂದು ಆಶೀರ್ವಚನವಿತ್ತರು.

ಸಭೆಯಲ್ಲಿ ತಮ್ಮಡಿಹಳ್ಳಿ ಮಠದ ಶ್ರೀ ಶ್ರೀಗಳವರು ಮತ್ತು ಕರ್ನಾಟಕ ರಾಜ್ಯ ಕೃಷಿಸಚಿವರಾದ ಎಸ್. ರೇವಣ್ಣನವರು ಭಾಗವಹಿಸಿದ್ದರು

ತಾ–7–8–84ರಂದು ಕಲ್ಪತರು ಗ್ರಾಮೀಣ ಬ್ಯಾಂಕ್ ಸೋಮೇಶ್ವರಪುರಕ್ಕೆ ಸ್ಥಳಾಂತರಗೊಂಡ ಸಂದರ್ಭದ ಸಮಾರಂಭದ ಉದ್ಘಾಟನೆ ಮಾಡುತ್ತ "ಬ್ಯಾಂಕುಗಳು ರಾಷ್ಟ್ರೀಕರಣಕ್ಕೆ ಮುಂಚೆ ತಮ್ಮ ಇಚ್ಛಾನುಸಾರ ವ್ಯವಹಾರ ನಡೆಸಿ ಹೆಚ್ಚಿನ ಬಡ್ಡಿ ವಿಧಿಸಿ ಜನತೆಯನ್ನು ಶೋಷಿಸುತ್ತಿದ್ದವು. ರಾಷ್ಟ್ರೀಕರಣದ ನಂತರ ಎಲ್ಲ ವರ್ಗದವರಿಗೂ ಎಲ್ಲ ಜನಾಂಗಕ್ಕೂ ಬ್ಯಾಂಕಿಂಗ್ ಸೌಲಭ್ಯ ದೊರಕುವಂತಾಗಿದೆ. ರಾಷ್ಟ್ರೀಕರಣಕ್ಕೆ ಮುಂಚೆ ಕೆಲವೇವರ್ಗದವರ ಸೊತ್ತಾಗಿದ್ದ ಅವು ಇಂದು ಭಾರತದ ಶ್ರೀ ಸಾಮಾನ್ಯನಿಗೂ ಎಟಕುವಂತಾಗಿರುವುದು ಸಂತೋಷದ ವಿಷಯ ಎನ್ನುತ್ತಾ-ಕಲ್ಪತರು ಗ್ರಾಮೀಣಬ್ಯಾಂಕು ಹಳ್ಳಿಗಳ ಬಡಜನರ ಅಭಿವೃದ್ಧಿಗೆ ತಕ್ಕ ಹಾಗೆ ಯೋಜನೆಗಳನ್ನು ರೂಪಿಸಿಕೊಳ್ಳಬೇಕು ಎಂದು ಸಲಹೆ ಮಾಡಿದರು

7.8 84ರಂದು ಗೂಳೂರಿನ ಗಣಪತಿ ಪ್ರೌಢಶಾಲೆಯ ನೂತನ ಕಟ್ಟಡದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಆಶೀರ್ವಾದ ನೀಡುತ್ತಾ "ರಾಷ್ಟ್ರಕ್ಕೆ ಪ್ರಜಾಪ್ರ

ಭುತ್ವ. ಸ್ವಾತಂತ್ರ್ಯ ಬಂದ ಮೇಲೆ ವಿದ್ಯಾಭ್ಯಾಸಕ್ಕೆ ವಿಶೇಷ ಗಮನ ನೀಡಿ ಅಪಾರ ಹಣ ವೆಚ್ಚಮಾಡಲಾಗುತ್ತಿದೆ. ಜನಸಾಮಾನ್ಯರು ಅದರ ಉಪಯೋಗ ಪಡೆದು ವಿಚಾರ ವಂತರು, ಪ್ರಜ್ಞಾಶೀಲರಾಗಬೇಕು-ಎಂದು ನುಡಿದರು, ಉದ್ಘಾಟನಾ ಭಾಷಣ ಮಾಡುತ್ತಾ "ಅತ್ಯಂತ ಉತ್ಸಾಹದಿಂದ ಸೇರಿದ್ದೀರಿ ಪ್ರೀತಿಯ ಸ್ವಾಗತ ನೀಡಿದ್ದೀರಿ ತಮ್ಮ ತೀರ್ವ ಗಂಟಲು ಬೇನೆ ಹೆಚ್ಚು ಮಾತನಾಡು ವಂತಿಲ್ಲ ವೆನ್ನುತ್ತ ಕೃತಜ್ಞತೆಗ ಳನ್ನು ಸಮರ್ಪಿಸುತ್ತ, ಪರಮ ಪೂಜ್ಯ ಶ್ರೀ ಶ್ರೀ ಗಳವರು ಮಾಡುತ್ತಿರುವ ಅಗಾಧ ಸೇವೆಯನ್ನು ಪ್ರಾಂಜಲ ಮನಸ್ಸಿನಿಂದ ಪ್ರಶಂಸಿಸಿದರು. ಆರೋಗ್ಯ ಸಚಿವರಾದ ಶ್ರೀ. ಪಿ ಜಿ. ಸಿಂಧ್ಯಾರವರು ಸ್ವಾಮೀಜಿಯವರ ಹಾಗೂ ಶಾಸಕ ಶ್ರೀ.ವೈ.ಕೆ. ರಾಮಯ್ಯನವರ ಸೇವೆಯನ್ನು ಕೊಂಡಾಡಿದರು. ಶಾಸಕ ರಾಮಯ್ಯನವರು ಗೂಳೂ ರಿಗೆ ಕಿರಿಯ ಕಾಲೇಜು ಬಂದುದಕ್ಕೆ ತಮ್ಮ ಸಂತೋಷ ವ್ಯಕ್ತ ಪಡಿಸಿದರಲ್ಲದೆ ಶ್ರೀ ಶ್ರೀ ಗಳವರ ಸೇವಾ ಜೀವನವನ್ನು ಕೃತಜ್ಞತೆಯಿಂದ ಸ್ಮರಿಸಿದರು. ಸಮಾರಂಭದಲ್ಲಿ ಶ್ರೀ ಶ್ರೀ ಗಳವರಿಗೂ, ಮುಖ್ಯ ಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗ್ಗಡೆಯವರಿಗೂ ಬಿನ್ನವತ್ತಳೆಯನ್ನು ಅರ್ಪಿಸಲಾಯಿತು.

ತಾ|| 11–8–84 ರಂದು "ಕುವೆಂಪು 80 ವಿಚಾರ ಸಂಕಿರಣ-ತುಮಕೂರು" ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ, ಪರಮಪೂಜ್ಯ ಶ್ರೀ ಶ್ರೀ ಗೌರಿ ಶಂಕರಸ್ವಾಮಿಗಳವರು (ಶ್ರೀ ಮಠದ ಉತ್ತರಾಧಿಕಾರಿಗಳು) ಶ್ರೀ ಕುವೆಂಪುರವರು ನಾಡಿನ ಮಹಾಕವಿಗಳು. ಅವರದು ಉಜ್ವಲವ್ಯಕ್ತಿತ್ವ ಕವಿಯನ್ನು ಗೌರವಿಸುವು ದೆಂದರೆ ಆ ಕವಿಯ ಕೃತಿಗಳನ್ನು ಅಭ್ಯಾಸ ಮಾಡುವುದೇ ಆಗಿದೆ. ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಯುವಜನಾಂಗ ಅಭ್ಯಾಸ ಮಾಡಬೇಕು. ಒಳ್ಳೆಯ ಅಭಿರುಚಿಯನ್ನು ಬೆಳೆಸಿಕೊಳ್ಳಬೇಕು. ಈ ವಿಚಾರ ಸಂಕಿರಣ ಯುವ ಜನಾಂಗಕ್ಕೆ ಒಳ್ಳೆಯ ಮಾರ್ಗದರ್ಶನ ನೀಡುವಂತಾಗಲಿ ಎಂದು ಆಶೀರ್ವಚನ ನೀಡಿದರು.

---

ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳೂ, ಮಂಗ ಳೂರಿನ ಪಶ್ಚಿಮ ವಲಯದ ಡಿ. ಐ. ಜಿ. ಶ್ರೀ ಎಲ್. ರೇವಣ್ಣ ಸಿದ್ದಯ್ಯ ಅವರು 38ನೇ ಸ್ವಾತಂತ್ರ್ಯೋತ್ಸವದಂದು ವಿಶಿಷ್ಟ ಸೇವೆ ಹಾಗೂ ಶ್ಲಾಘನೀಯ ಸೇವೆಗಾಗಿ ರಾಷ್ಟ್ರಪತಿಗಳ ಪದಕ ಪಡೆದುದ ಕ್ಕಾಗಿ 'ಸಿದ್ಧಗಂಗಾ' ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿ ಸುತ್ತದೆ.

# ಶಿಕ್ಷಣತಜ್ಞ ಕೆ. ಎಸ್. ಆರ್. ಕಣ್ಮರೆ

—ಹೆಚ್. ಬಿ. ಗಂಗಾಧರಯ್ಯ



**ಯಾವ** ವ್ಯಕ್ತಿಯೇ ಆಗಲಿ ಈ ಲೋಕದಿಂದ ಕಣ್ಮರೆಯಾಗುತ್ತಿದ್ದಂತೆಯೇ ಅವರ ವ್ಯಕ್ತಿತ್ವ ಮತ್ತು ಮಾನವೀಯ ಮೌಲ್ಯಗಳ ಬಗೆಗೆ ಜನತೆ ಸ್ಮರಿಸುವುದನ್ನು ಕಾಣುತ್ತೇವೆ. ಇಂತಹ ಒಂದು ಆಕಸ್ಮಿಕ ಘಟನೆ ಇತ್ತೀಚೆಗೆ ನಡೆಯಿತು.

ಶ್ರೀ ಸಿದ್ಧಗಂಗಾ ಮಠದ ಬಸವೇಶ್ವರ ಶಿಕ್ಷಕ ವಿದ್ಯಾಲಯದ ಅಧೀಕ್ಷಕರಾಗಿದ್ದ ನಿವೃತ್ತ ಕೆ. ಸೂರ್ಯನಾರಾಯಣರಾವ್ ಅವರು ಇತ್ತೀಚೆಗೆ 19-7-84 ರಂದು ಹೃದಯಾಘಾತದಿಂದ ಸಾವನ್ನಪ್ಪಿದರು. ಇದು ಶ್ರೀ ಮಠದ ಅಭಿಮಾನಿಗಳ ಬಳಗಕ್ಕೆ, ಕಲಾಭಿಮಾನಿಗಳಿಗೆ, ಬಂಧು-ಮಿತ್ರರಿಗೆ ಮತ್ತು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಅವರ ಮಾರ್ಗದರ್ಶನದಲ್ಲಿ ತರಬೇತಿ ಪಡೆದ ಶಿಕ್ಷಕ ಸಮಾಜಕ್ಕೆ ಅಪಾರವಾದ ನಷ್ಟವನ್ನುಂಟು ಮಾಡಿದೆ.

ಇವರ ತಂದೆ ಹೆಸರು ಕೃಷ್ಣಮೂರ್ತಿ. ದಿವಂಗತರು 3-9-1923 ರಲ್ಲಿ ಹಿರಿಯ ಪುತ್ರನಾಗಿ ಜನ್ಮವೆತ್ತಿದರು. ಕೃಷ್ಣಮೂರ್ತಿಯವರು ಎಂ. ಎ. ಬಿ. ಟಿ. ಪದವೀಧರರು. ಮಗನನ್ನು ಇಂಜನಿಯರ್ ಅಥವಾ ಡಾಕ್ಟರ್ ಮಾಡಿಸಬೇಕೆಂಬ ಹಂಬಲ. ತಂದೆಯಂತೆಯೇ ಮಗನೂ ಸಹ ಪವಿತ್ರವಾದ ಶಿಕ್ಷಕ ಸೇವೆಗೆ ಅರ್ಪಿಸಿಕೊಳ್ಳಬೇಕಾಯಿತು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ತುಮಕೂರಿನಲ್ಲಿ ನಡೆಯಿತು. ಕಾಲೇಜು ಶಿಕ್ಷಣ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಡೆದು ಬಿ. ಎಸ್ಸಿ. ಪದವೀಧರರಾದರು. ಅನಂತರ ಔದ್ಯೋಗಿಕ ತರಬೇತಿ ಬಿ. ಇಡಿ ಪದವೀಯನ್ನುಗಳಿಸಿದರು. ಆ ವೇಳೆಗೆ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಮಾಜಕ್ಕೆ ಉತ್ತಮ ಶಿಕ್ಷಕರನ್ನು ನೀಡಬೇಕೆಂಬ ಆಕಾಂಕ್ಷೆಯಿಂದ ತುಮಕೂರಿನಲ್ಲಿ 1955-56 ಪ್ರಾಥಮಿಕ ಶಿಕ್ಷಣ ತರಬೇತಿ ಕಾಲೇಜನ್ನು ತೆರೆದರು. ಆಗ ತಾನೆ ಕಾಲೇಜು ಶಿಕ್ಷಣ ಮುಗಿಸಿದ್ದ ಶ್ರೀ ಕೆ. ಎಸ್. ಆರ್‌ರವರಿಗೆ ಇಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಲು ಅವಕಾಶದೊರೆತದ್ದು ಪುಣ್ಯ ವಿಶೇಷವೆಂದು ಅವರೇ ಹೇಳುತ್ತಿ

ದ್ದರು. ತರಬೇತಿ ಸಂಸ್ಥೆ ಅವರಿಗೆ ಶಿಕ್ಷಣ ಮೌಲ್ಯಗಳನ್ನು ಅನುಷ್ಠಾನಕ್ಕೆ ತರಲು ಒಂದು ಪ್ರಯೋಗಶಾಲೆಯಾಯಿತು. ಆನಂದ ಮತ್ತು ಉತ್ಸಾಹದಿಂದ ವಿದ್ಯಾರ್ಥಿ ಶಿಕ್ಷರಿಗೆ ಮಾರ್ಗದರ್ಶನ ನೀಡುತ್ತಾ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಶಿಕ್ಷಣದಲ್ಲಿ ತುಂಬ ಅಭಿರುಚಿ ಮತ್ತು ಸಂಶೋಧನೆಗಳ ಬಗೆಗೆ ಇವರಿಗೆ ವಿಶೇಷವಾದ ಆಸಕ್ತಿ ಇದ್ದಿತು. ಜ್ಞಾನದಾಹಕ್ಕೆ ಅಧ್ಯಯನಕ್ಕೆ ಮಹತ್ವ ಕೊಡುತ್ತಿದ್ದರು. ಇದರ ಪೂರೈಕೆಗಾಗಿ ಖಾಸಗಿಯಾಗಿ ಅಭ್ಯಾಸ ಮಾಡಿ ಸ್ನಾತಕೋತ್ತರ ಎಂ. ಇಡಿ ಪದವಿಯನ್ನೂಗಳಿಸಿದರು. ಇದು ಅವರ ಕಾರ್ಯಕ್ಷೇತ್ರಕ್ಕೆ ಚಿಲುಮೆಯೋಪಾದಿಯಲ್ಲಿ ಚೇತನ ಶಕ್ತಿಯಾಯಿತು.

ಸುಮಾರು ಎರಡು ದಶಕಗಳ ಹಿಂದೆ ತರಬೇತಿ ಹೊಂದಿದ ಶಿಕ್ಷಕರ ಸಂಖ್ಯೆ ತೀರ ಕಡಿಮೆ. ಪ್ರಾಥಮಿಕ ಶಿಕ್ಷಣದ ಗುಣಮಟ್ಟದ ಸುಧಾರಣೆಗೆ ತರಬೇತಿಯುಳ್ಳ ಶಿಕ್ಷಕರ ಬೇಡಿಕೆ ಹೆಚ್ಚಾಗಿ ಬೇಕಾಗಿದ್ದಿತು. ಶಿಕ್ಷಣದ ಪ್ರಗತಿಗೆ ತಮ್ಮ ಸೇವೆಯನ್ನೇ ಮೀಸಲಾಗಿಟ್ಟಿರುವ ಪರಮಪೂಜ್ಯ ಶ್ರೀ ಶ್ರೀಗಳು ಶ್ರೀ ಮಠದಲ್ಲಿಯೇ ಮತ್ತೊಂದು ಪ್ರಾಥಮಿಕ ಶಿಕ್ಷಕರ ತರಬೇತಿ ಕಾಲೇಜನ್ನು 1961ನೇ ವರ್ಷದಲ್ಲಿ ಪ್ರಾರಂಭಿಸಿದರು. ಶ್ರೀ. ಕೆ. ಎಸ್. ಆರ್ ಅವರ ಕಾರ್ಯ ತತ್ಪರತೆ ಉತ್ತಮ ಶಿಕ್ಷಕ ನಿಗಿರಬೇಕಾದ ಆದರ್ಶವಾದ ಮಾನವೀಯ ಮೌಲ್ಯಗಳು ಶ್ರೀ ಶ್ರೀಗಳವರನ್ನು ಆಕರ್ಷಿಸಿತು. ಇದರಿಂದಾಗಿ ತುಮಕೂರಿನ ತರಬೇತಿ ಕಾಲೇಜಿನಿಂದ ಮಠದಲ್ಲಿ ಹೊಸದಾಗಿ ತೆರೆದ ಕಾಲೇಜಿಗೆ ಇವರನ್ನು ವರ್ಗಾವಣೆ ಮಾಡಲಾಯಿತು. ಇಲ್ಲಿ ನಿವೃತ್ತರಾಗುವವರೆಗೆ ಸಲ್ಲಿಸಿದ ವಿವಿಧ ಮುಖ ಕಾರ್ಯಚಟುವಟಿಕೆಗಳು ಹಲವಾರು, ಇವರು ತುಂಬಾ ಸರಳಜೀವಿ. ಸಹೃದಯಿಗಳು ದಯಾಪರರು, ನೈತಿಕ ಮೌಲ್ಯಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿದ್ದರು. ಕಾಲೇಜಿನಲ್ಲಿ ಸಹೋದ್ಯೋಗಿಗಳನ್ನು ಮತ್ತು ವಿದ್ಯಾರ್ಥಿಗಳನ್ನು ಆಕರ್ಷಿಸಿ ಒಳ್ಳೆಯ ಪ್ರಭಾವವನ್ನು ಬೀರುತ್ತಿದ್ದರು. ಅವರ ಕಾರ್ಯಗೌರವ, ಕಾಲನಿಷ್ಠೆ ಮತ್ತು ನಡೆನುಡಿಗಳು ಎಲ್ಲರನ್ನೂ ವಿಸ್ಮಯಗೊಳಿಸುತ್ತಿತ್ತು.

ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಅನನ್ಯ ಭಕ್ತಿ. ಶ್ರೀ ಶ್ರೀಗಳಿಗೂ ಅಷ್ಟೇ ವಾತ್ಸಲ್ಯ. ಕರ್ನಾಟಕದ ಮಠಾಧಿಪತಿಗಳ ಶ್ರೇಣಿಯಲ್ಲಿ ನಮ್ಮ ಶ್ರೀ ಶ್ರೀಗಳವರಿಗೇ ಅಗ್ರಸ್ಥಾನ ಸಲ್ಲಬೇಕು. ಇದನ್ನು ಮುಂದಿನ ಪೀಳಿಗೆ ಮತ್ತು ಇತಿಹಾಸ ಭಕ್ತಿ ಗೌರವದಿಂದ ಸ್ಮರಿಸುತ್ತದೆ. ಅವರ ವಿಶೇಷವಾದ ಜೀವನ ದರ್ಶನವು ಎಲ್ಲರಿಗೂ ಸ್ಫೂರ್ತಿನೀಡಿ ಉದಾತ್ತಗೊಳಿಸುತ್ತದೆ ಎಂದು ಆಗಾಗ್ಗೆ ಹೇಳುತ್ತಿದ್ದರು.

ಶ್ರೀ ಶ್ರೀಗಳವರ ಬೃಹತ್ ಪ್ರಮಾಣದ ಸಮಾಜ ಸೇವೆಯಲ್ಲಿ ಭಾಗಿಯಾಗಿ ಕಿಂಚಿತ್ತಾದರೂ ಸಹಕಾರ ನೀಡಬೇಕೆಂದು ಅವರ ಧ್ಯೇಯವಾಗಿದ್ದಿತು. ಇವರಿಗೆ

ನಾಟಕವೆಂದರೆ ಹುಚ್ಚು. ಮೈ ಮರೆಯುತ್ತಿದ್ದರು. ಸ್ವಂತ ಲೆಗ್ ಹಾರ್ಮೋನಿಯಂ ಇಟ್ಟಿದ್ದರು. ಬಿಡುವಿನ ವೇಳೆಯಲ್ಲಿ ಮನೆ ಮತ್ತು ಕಾಲೇಜಿನಲ್ಲಿ ಹಾರ್ಮೋನಿಯಂ ಮೇಲೆ ಕೈ ಆಡಿಸುತ್ತಾ ಹಾಡುಗಳನ್ನು ನುಡಿಸುತ್ತಿದ್ದರು. ಶ್ರೀ ಮಠದಲ್ಲಿ ಭಕ್ತ ಮಾರ್ಕಂಡೇಯ ನಾಟಕವು ತುಂಬಾ ಹೆಸರುಗಳಿಸಿ ಮೆಚ್ಚುಗೆಗಳಿಸಿತ್ತು. ಅದರಲ್ಲಿ ಅಗ್ನಿಮುಖನ ಪಾತ್ರವನ್ನು ಇವರು ವಹಿಸಿ ತಮ್ಮ ನಟನಾ ಕೌಶಲ್ಯದಿಂದ ಪ್ರೇಕ್ಷಕರನ್ನು ದಂಗುಬಡಿಸುತ್ತಿದ್ದರು. ನಂತರ ಜನತೆಯಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡಲು ಶ್ರೀ ಶ್ರೀಗಳು ಬಸವೇಶ್ವರ ನಾಟಕವನ್ನು ಇವರ ನೇತೃತ್ವದಲ್ಲಿ ಅಭ್ಯಾಸ ಮಾಡಿಸುವಂತೆ ಆಜ್ಞೆ ಇತ್ತರು. ಇವರಿಗೆ ಇದ್ದ ಕಲಾಪ್ರೌಢಿಮೆಯನ್ನು ಪ್ರಕಾಶನಕ್ಕೆ ತರಲು ಒಳ್ಳೆಯ ಅವಕಾಶದೊರಕಿತು. ಇದರಲ್ಲಿ ಇವರ ಮಂಚಣ್ಣನ ಪಾತ್ರದ ಅಭಿನಯವಂತೂ ಎಲ್ಲರ ಮನಸ್ಸನ್ನು ಸೂರೆಗೊಂಡಿತ್ತು. ಈ ನಾಟಕದ ಯಶಸ್ವಿಗಾಗಿ ಬಹಳವಾಗಿ ಶ್ರಮಿಸಿದರು. ಇದರ ಫಲವಾಗಿ ಶ್ರೀ ಮಠದ ಸಿದ್ಧಲಿಂಗೇಶ್ವರ ನಾಟಕ ಮಂಡಲಿಯವರು ಅಭಿನಯಿಸುತ್ತಿರುವ ಜಗಜ್ಯೋತಿ ಬಸವೇಶ್ವರ ನಾಟಕ ಇಂದು ರಾಜ್ಯದಾದ್ಯಂತ ಎಲ್ಲರ ಮೆಚ್ಚುಗೆಗಳಿಸಿ ಪ್ರಖ್ಯಾತಿಯನ್ನುಗಳಿಸಿದೆ. ಶ್ರೀ ಮಠದಲ್ಲಿ ವರ್ಷಕ್ಕೊಮ್ಮೆ ಶಿವರಾತ್ರಿಯ ಸಂದರ್ಭದಲ್ಲಿ ನಡೆಯುವ ವಸ್ತು ಪ್ರದರ್ಶನದ ಸಾಂಸ್ಕೃತಿಕ ಚಟುವಟಿಕೆಯ ಕಾರ್ಯಗಳು ಇವರ ಮಾರ್ಗದರ್ಶನದಲ್ಲಿ ಬೋಧಪ್ರದವಾಗಿ ನಡೆಯುತ್ತಿದ್ದವು

ಇವರು ಶಿಕ್ಷಣ ಮತ್ತು ಸಾಹಿತ್ಯ ಕಲಾ ಕ್ಷೇತ್ರದಲ್ಲಿ ಪ್ರತಿಭಾನ್ವಿತ ವ್ಯಕ್ತಿಯಾಗಿದ್ದರು 'ಸೂರಿ' ಎಂಬ ಹೆಸರಿನಲ್ಲಿ ತುಮಕೂರಿನಲ್ಲಿ ಚಿರಪರಿಚಿತರಾಗಿ ಎಲ್ಲರ ಗೌರವಾದರಕ್ಕೆ ಪಾತ್ರರಾಗಿದ್ದರು. ಇವರು ಸ್ವತಃ ರಚಿಸಿದ ನಾಟಕಗಳಾದ ಓದದಬಾಳು, ಹಳ್ಳಿಯ ಪರಿವರ್ತನೆ, ಹಂಗ್ಮಾಡಿದರೆ ಹಿಂಗಾಗ್ತದೆ ಅಪ್ಪೂರಾಯನ ಕಾಳಗ, ಭರತನ ಭಾತೃಪ್ರೇಮ ಮತ್ತು ಶ್ರೀ ಸಿದ್ಧಲಿಂಗೇಶ್ವರ ಮಹಾತ್ಮೆ ಬಹು ಜನಪ್ರಿಯವಾಗಿವೆ. ಅವರು ನಮ್ಮನ್ನು ಅಗಲಿದರೂ ಅವರ ಸೇವಾಧರ್ಮ, ಶ್ರೀ ಮಠದ ಬಗೆಗೆ ನಿಷ್ಠೆ, ಪಾಂಡಿತ್ಯ, ಸರಳತೆ ಮತ್ತು ಕಲಾಭಿಮಾನ ಎಲ್ಲರನ್ನು ಸ್ಫೂರ್ತಿಗೊಳಿಸಿ ಮಾರ್ಗದರ್ಶನ ಮಾಡುತ್ತದೆ. ಇಂದಿನ ಸಮಾಜದಲ್ಲಿ ಅಂಥಹ ಸಹೃದಯ ಮೂರ್ತಿ ಕರ್ತವ್ಯ ನಿಷ್ಠೆಯುಳ್ಳ ವ್ಯಕ್ತಿಗಳನ್ನು ಕಾಣುವುದು ಅಪರೂಪವಾಗಿದೆ. ಅವರು ಕಣ್ಮರೆಯದರೂ ಅವರ ವಿಶೇಷವಾದ ವ್ಯಕ್ತಿತ್ವವು ಎಲ್ಲರ ಮನದಲ್ಲಿ ಅಚ್ಚೊತ್ತಿದಂತೆ ನಿಂತಿದೆ. ಈ ಲೋಕದಿಂದ ದೂರವಾಗಿ ನಿಧನದಿಂದಾಗಿರುವ ದುಃಖವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗಕ್ಕೆ ಮತ್ತು ಅವರ ಆತ್ಮಕ್ಕೆ ಚಿರಶಾಂತಿಯನ್ನು ದಯಾಮಯನಾದ ಪರಮೇಶ್ವರನು ಕರುಣಿಸಿ ಸನ್ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥನೆ.

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.